CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೩೦, ೨೦೦೪ (ಪುಷ್ಯ ೯, ಶಕ ವರ್ಷ ೧೯೨೬) | ಸಂಚಿಕೆ ೫೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು ಸಚಿವಾಲಯ

**ವಿಷಯ:** 2004-05ನೇ ಸಾಲಿಗೆ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ರೂ.40.00 ಲಕ್ಷಗಳ ದ್ವಿತೀಯ ಕಂತಿನ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸಮ ಕ್ರಮಾಂಕದ ದಿನಾಂಕ: 7.8.2004ರ ಸರ್ಕಾರಿ ಆದೇಶ.
2. ದಿನಾಂಕ: 27.09.2004ರ ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರ, ಬೆಂಗಳೂರು ಇವರ ಪತ್ರ ಸಂಖ್ಯೆ: ಕರಾಕಾಸೇಪ್ರಾ:ಅಕೌಂಟ್ಸ್:87:2003-04 : 2004-05.

**ಪ್ರಸ್ತಾವನೆ:**

2004-05ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಉಚಿತ ಕಾನೂನು ನೆರವು, ಕಾನೂನು ಸಾಕ್ಷರತಾ ಆಂದೋಳನ ಕಾರ್ಯಕ್ರಮ ಕಾನೂನು ಶಿಬಿರದ ಮೂಲಕ ಉಚಿತ ಕಾನೂನು ಸಲಹೆ ನೀಡುವುದು ಹಾಗೂ ಜನತಾ ನ್ಯಾಯಾಲಯ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳಲು ರೂ.104.00 ಲಕ್ಷಗಳನ್ನು ಸಹಾಯಾನುದಾನವಾಗಿ ನೀಡಲು ಒದಗಿಸಿದ್ದು ಅದರಲ್ಲಿ ಸದರಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, ಪ್ರಾಧಿಕಾರದ ಕೋರಿಕೆಯ ಮೇರೆಗೆ, ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ.30.00 ಲಕ್ಷಗಳನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರವು ಮೇಲೆ ನಮೂದಿಸಲಾಗಿರುವ ಕಾರ್ಯಕ್ರಮಗಳನ್ನು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರಗಳು ಮತ್ತು ತಾಲ್ಲೂಕು ಕಾನೂನು ಸೇವಾ ಸಮಿತಿಗಳ ವೇತನ ಮತ್ತು ಗುರಿಯೋಜನೆ ಕಾರ್ಯಕ್ರಮಗಳಾದ ಕಾನೂನು ಸೇವಾ ಕಾರ್ಯಕ್ರಮ ಮತ್ತು ಕಾನೂನು ಸಾಕ್ಷರತಾ ಕಾರ್ಯಕ್ರಮಗಳ ವೆಚ್ಚಗಳಿಗಾಗಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕಾಗಿ ಬಜೆಟ್‌ನಲ್ಲಿ ಹಂಚಿಕೆಗೊಂಡಿರುವ ಸಹಾಯಾನುದಾನದಲ್ಲಿ ಬಿಡುಗಡೆ ಮಾಡಬೇಕಾಗಿರುವ ಬಾಕಿ ಮೊತ್ತ ರೂ.74.00 ಲಕ್ಷಗಳನ್ನು ಅತಿ ಶೀಘ್ರವಾಗಿ ಬಿಡುಗಡೆ ಮಾಡುವಂತೆ ಮೇಲೆ, ಎರಡರಲ್ಲಿ ಓದಲಾದ ದಿನಾಂಕ: 27.09.2004ರ ಪತ್ರದಲ್ಲಿ ಕೋರಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 18 ಎಲ್‌ಎಡಿ 2004, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರಕ್ಕೆ 2004-05ನೇ ಸಾಲಿಗೆ ಲೆಕ್ಕ ಶೀರ್ಷಿಕೆ "2235-60-200-5-01-101 ರಡಿಯಲ್ಲಿ ಪ್ರಸ್ತುತ ಸಾಲಿನಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಎರಡನೇ ಕಂತಾಗಿ ರೂ.40.00 ಲಕ್ಷಗಳನ್ನು (ರೂಪಾಯಿ ನಲವತ್ತು ಲಕ್ಷಗಳನ್ನು ಮಾತ್ರ) ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರು ಮಾಡಿದೆ.

1) ಯೋಜಿತ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವ ಕುರಿತು ವಿವರವಾದ ವರದಿ ನೀಡುವುದು.
2) ಪ್ರಸ್ತುತ ಮಂಜೂರು ಮಾಡಲಾಗಿರುವ ಅನುದಾನಕ್ಕೆ ಉಪಯೋಗಿ ಪ್ರಮಾಣ ಪತ್ರವನ್ನು ಸಲ್ಲಿಸುವುದು. (Utilization Certificate).
3) ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಯಾವ ಯಾವ ಉಪಲೆಕ್ಕ ಶೀರ್ಷಿಕೆಗಳಿಗೆ ಉಪಯೋಗಿಸಲಾಗಿದೆ ಎಂಬುದರ ಬಗ್ಗೆ ಮಾಹಿತಿ.

ಈ ಮೊತ್ತದ ಅನುದಾನ ಬಿಲ್ಲಿಗೆ ಸರ್ಕಾರದ ಕಾನೂನು ಇಲಾಖಾ ಕಾರ್ಯದರ್ಶಿಯವರ ಮೇಲು ರುಜು ಪಡೆಯುವ ಮೂಲಕ ಹಣ ಪಡೆಯಲು ಸೂಚಿಸಿದೆ.

ಈ ಬಗೆಗಿನ ಬಿಲ್ಲು : ಪೇಯಿ ಸ್ವೀಕೃತಿಯ ಬಗ್ಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಎಫ್‌ಆರ್ 2003 ದಿನಾಂಕ: 22.01.2004ರ ಅನ್ವಯ ಕ್ರಮ ಜರುಗಿಸುವ ಷರತ್ತಿಗೆ ಒಳಪಟ್ಟಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1102 ವೆಚ್ಚ-7:04 ದಿನಾಂಕ: 05.11.2004 ರಲ್ಲಿ ನೀಡಲಾಗಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ದಯಾನಂದ ಶೆಟ್ಟಿ**
ಪಿ.ಆರ್. 1369 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-2).

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಎಸ್.ಎಸ್.ಕಬ್ಬೂರ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾಂ, ಮತ್ತು ಶ್ರೀಮತಿ ಶೋಭಾ ಡಿ.ಬಾಗೇವಾಡಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೀದರ್, ಇವರುಗಳ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ, ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11ಎ ಮೇರೆಗೆ ಮುಂದುವರಿದ ವಿಚಾರಣೆ ನಡೆಸಲು ಪ್ರಕರಣವನ್ನು ವಿಚಾರಣಾಧಿಕಾರಿಗೆ ಹಿಂದಿರುಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಇಡಿ 169 ಡಿಜಿಡಿ 2001 ದಿ:6.3.2003.
2. ಶ್ರೀ ಜೆ.ಭಾಸ್ಕರಯ್ಯ, ನಿರ್ದೇಶಕರು, (ಪ್ರಾಥಮಿಕ ಶಿಕ್ಷಣ) ಆಯುಕ್ತರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ವಿಚಾರಣಾ ವರದಿ ಸಂ:ಇವಿ:7:98-99 ದಿ:3.2.2004

**ಪ್ರಸ್ತಾವನೆ:**

ಶ್ರೀ ಎಸ್.ಎಸ್.ಕಬ್ಬೂರ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾಂ, ಮತ್ತು ಶ್ರೀಮತಿ ಶೋಭಾ ಡಿ. ಬಾಗೇವಾಡಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೀದರ್, ಇವರುಗಳು ಈ ಹಿಂದೆ ಚಿಕ್ಕೋಡಿಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರಾಗಿ ಮತ್ತು ಶಿಕ್ಷಣಾಧಿಕಾರಿಯಾಗಿ ಅನುಕ್ರಮವಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ಸಂಬಂಧಿಸಿದಂತೆ ನಡೆದಿರುವ ಪರೀಕ್ಷೆಯಲ್ಲಿ ನಡೆದಿದೆ ಎನ್ನಲಾದ ಕರ್ತವ್ಯನಿರ್ಲಕ್ಷತೆ, ದುರ್ನಡತೆ ಹಾಗೂ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮಾಂಕ (1) ರ ದಿ:6.3.2003 ರ ಸರ್ಕಾರಿ ಆದೇಶದ ಮೂಲಕ ಶ್ರೀ ಭಾಸ್ಕರಯ್ಯ, ನಿರ್ದೇಶಕರು, (ಪ್ರಾಥಮಿಕ ಶಿಕ್ಷಣ) ಆಯುಕ್ತರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರನ್ನು ವಿಚಾರಣೆ ನಡೆಸಲು ವಿಚಾರಣಾಧಿಕಾರಿಯಾಗಿಯೂ ಹಾಗೂ ಶ್ರೀ ಎಂ.ಎಸ್.ಪಾಟೀಲ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮಾಂಕ (2)ರ ದಿ:3.2.2004 ರಂದು ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಸಲ್ಲಿಸಿದ್ದರು. ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಕೆಳಕಂಡ ಕಾರಣಗಳಿಂದಾಗಿ ವಿಚಾರಣಾ ವರದಿಯು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ರ ಪ್ರಕಾರ ಇಲ್ಲದೆ ಇರುವುದರಿಂದ; ಸದರಿ ನಿಯಮಾವಳಿಗಳ ನಿಯಮ 11-ಎ ರಡಿ ಪ್ರಕರಣವನ್ನು ವಿಚಾರಣಾಧಿಕಾರಿಗಳಿಗೆ ಮುಂದುವರಿದ ವಿಚಾರಣೆ ನಡೆಸುವುದಕ್ಕಾಗಿ ಹಿಂತಿರುಗಿಸುವುದು ಅವಶ್ಯಕವಾಗಿದೆ:-

1. ಆರೋಪ-1ರಲ್ಲಿ ತಿಳಿಸಿರುವಂತೆ ಹಾಗೂ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಯ ಸ್ಪರ್ಧಾತ್ಮಕ ಪರೀಕ್ಷೆಗೆ ಸಂಬಂಧಿಸಿದ ಮಾರ್ಗಸೂಚಿಯಂತೆ ಪರೀಕ್ಷೆಯ ಮುಂಚಿತವಾಗಿ ಪರೀಕ್ಷೆ ನಡೆಸುವ ಬಗ್ಗೆ ಸಾಧಕ-ಬಾಧಕಗಳನ್ನು ಪೂರ್ಣ ಪ್ರಮಾಣದಲ್ಲಿ ಉಪನಿರ್ದೇಶಕರು ಚರ್ಚಿಸಬೇಕಾಗಿತ್ತು. ಪರೀಕ್ಷೆಯನ್ನು ನಡೆಸುವ ವಿಚಾರದಲ್ಲಿ ಆರೋಪ-1 ರಲ್ಲಿ ತಿಳಿಸಿರುವಂತೆ ಹಾಗೂ ಪರೀಕ್ಷೆಗೆ ಸಂಬಂಧಿಸಿದ ಮಾರ್ಗ ಸೂಚಿಯಂತೆ ಉಪನಿರ್ದೇಶಕರು ಯಾವುದೇ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೆ ಇದ್ದ ಕಾರಣದಿಂದಾಗಿ ಉಪನಿರ್ದೇಶಕರು, ಸಮರ್ಪಕವಾಗಿ ಕಾರ್ಯನಿರ್ವಹಿಸಲು ವಿಫಲರಾಗಿ ದುರ್ನಡತೆ ಎಸಗಿದ್ದಾರೆ.

2. ದಿನಾಂಕ:29.10.2001 ಸಂಖ್ಯೆ:ಜಿಗುವಿ/ಸಿಇಟಿ ಪರೀಕ್ಷೆ/ಚಿಕ್ಕೋಡಿ/01 ರ ಬೆಳಗಾಂ ನ ಪೋಲೀಸ್ ಅಧೀಕ್ಷಕರು, ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರದಲ್ಲಿ ಈ ಎಲ್ಲಾ ಗೊಂದಲಕ್ಕೆ ಅವ್ಯವಸ್ಥೆಗೆ ಉಪನಿರ್ದೇಶಕರು ಪೂರ್ವಬಾವಿಯಾಗಿ ಯಾವುದೇ ತಯಾರು ನಡೆಸಿಕೊಳ್ಳದೆ ಇರುವುದು ಕಾರಣವಾಗಿದೆ ಎಂದು ಸ್ಪಷ್ಟಪಡಿಸಿದ್ದಾರೆ.

3. ಶಾಲಾ ಶಿಕ್ಷಕರ ನೇಮಕಾತಿಯನ್ನು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ರಾಜ್ಯಾದ್ಯಂತ ಜಿಲ್ಲೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ಭರ್ತಿ ಮಾಡಲು ಆಯಾ ಶೈಕ್ಷಣಿಕ ಜಿಲ್ಲಾ ಕೇಂದ್ರಗಳಲ್ಲಿ ದಿ:28.10.2001 ರಂದು ಸಮಯ 10.30 ರಿಂದ ಅಪರಾಹ್ನ 1.30 ರವರೆಗೆ ಇಟ್ಟುಕೊಳ್ಳಲಾಗಿತ್ತು. ಇಂತಹ ಸಮಸ್ಯೆಯು ಇನ್ನಾವುದೇ ಜಿಲ್ಲೆಯಲ್ಲಿ ನಡೆದಿರುವುದು ವರದಿಯಾಗಿಲ್ಲ. ವಿಚಾರಣಾಧಿಕಾರಿಗಳು ತಮ್ಮ **ವಿಚಾರಣಾ ವರದಿಯ-ವಿಚಾರಣಾಧಿಕಾರಿಗಳ ಅಭಿಪ್ರಾಯ**-ದಲ್ಲಿ ತಿಳಿಸಿರುವಂತೆ, ಉಪ ನಿರ್ದೇಶಕರು ತೊಂದರೆಗೆ ಒಳಗಾಗಿದ್ದರು ಎಂಬ ಅಂಶದ ಮೇರೆಗೆ ಆರೋಪ ಸಾಬೀತಾಗಿಲ್ಲ ಎಂಬುದನ್ನು ಅಂಗೀಕರಿಸಲು ಬರುವುದಿಲ್ಲ. ಈ ನಿರ್ಣಯದಲ್ಲಿನ ಅಂಶಗಳನ್ನು ಪರಿಶೀಲಿಸಿದಾಗ ಉಪನಿರ್ದೇಶಕರು ಯಾವುದೇ ಪರೀಕ್ಷೆಯ ಪೂರ್ವಬಾವಿ ತಯಾರಿ ನಡೆಸಿಲ್ಲವೆಂಬುದು ಖಚಿತಪಡುತ್ತದೆ.

4. ಸಿಬ್ಬಂದಿಯ ಕೊರತೆ ಹಾಗೂ ಇನ್ನಾವುದೇ ಸಮಸ್ಯೆ ಇದ್ದಾಗ ಪರೀಕ್ಷೆಯನ್ನು ಸಮಯಕ್ಕೆ ಸರಿಯಾಗಿ ನಡೆಸಲು ಸಾಧ್ಯವಾಗದೇ ಇರುವ ಅಂಶವನ್ನು ಸಹನಿರ್ದೇಶಕರು:ಆಯುಕ್ತರೊಂದಿಗೆ ಚರ್ಚಿಸಿ, ಅವರ ಮಾರ್ಗದರ್ಶನ ಪಡೆಯಬೇಕಾಗಿತ್ತು. ಆದರೆ ಇಂತಹ ಕ್ರಮ ಕೈಗೊಳ್ಳದೆ ದುರ್ನಡತೆ ಎಸಗಿದ್ದಾರೆ.

5. ಅಭ್ಯರ್ಥಿಗಳ ಮಾಹಿತಿ ಗಣಕೀಕರಣಗೊಳಿಸಲು ಚಿಕ್ಕೋಡಿಯಲ್ಲಿ ಹೊಸದಾಗಿ ಪ್ರಾರಂಭಗೊಂಡಿದ್ದ ಆಪ್ಟೆಕ್ ಕಂಪನಿಗೆ ನೀಡಲಾಗಿತ್ತೆಂದು, ಅದರಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಅನುಭವ ಕೊರತೆಯಿತ್ತೆಂದು, ಇದರಿಂದಾಗಿ ಎಲ್ಲಾ ರೀತಿಯಿಂದಲೂ ತಪ್ಪು ಮಾಹಿತಿ ಪಡೆಯಲಾಯಿತೆಂದು ತಿಳಿಸಿದ್ದಾರೆ. ಇಂತಹ ಪ್ರಾಮುಖ್ಯವಾದ ಕಾರ್ಯವನ್ನು ಸದರಿ ಕಂಪನಿಗೆ ವಹಿಸುವಾಗ ಯಾವ ರೀತಿಯಲ್ಲಿ ನಾಮಿನಲ್ ರೋಲ್ ತಯಾರಿಸಬೇಕೆಂಬುದರ ಬಗ್ಗೆ ಉಪನಿರ್ದೇಶಕರು ಸರಿಯಾದ ಮಾರ್ಗದರ್ಶನ ನೀಡಿಲ್ಲದಿರುವುದು ಕಂಡುಬಂದಿದೆ. ಚಿಕ್ಕೋಡಿಯಲ್ಲಿ 15 ಪರೀಕ್ಷಾ ಕೇಂದ್ರಗಳನ್ನು ಮಾಡಿದ್ದು, ಪರೀಕ್ಷೆ ತೆಗೆದುಕೊಂಡಿರುವ ಅಭ್ಯರ್ಥಿಗಳಿಗೆ Hall-Ticket ನೀಡಿದ ನಂತರ ಯಾವ ಯಾವ ಅಭ್ಯರ್ಥಿಯು ಯಾವ ಪರೀಕ್ಷಾ ಕೇಂದ್ರದಲ್ಲಿ ಪರೀಕ್ಷೆಗೆ ಹಾಜರಾಗಬೇಕೆಂಬುದರ

ಬಗ್ಗೆ ಸೂಚನೆ ನೀಡಿದ್ದರೂ ಸಹ ಆಯಾ ಪರೀಕ್ಷಾ ಕೇಂದ್ರದಲ್ಲಿ ಅಂತಹ ಅಭ್ಯರ್ಥಿಗಳ ನೊಂದಣಿ ಸಂಖ್ಯೆಯನ್ನು ನಮೂದಿಸದೇ ಇರುವ ಪರಿಣಾಮದಿಂದಾಗಿ ಅಭ್ಯರ್ಥಿಗಳಿಗೆ ಪರೀಕ್ಷೆ ಬರೆಯಲು ಅವಕಾಶ ಸಿಗದೆ ಗೊಂದಲ ವಾತಾವರಣ ಸೃಷ್ಟಿಯಾಗಿರುವುದು ಕಂಡುಬಂದಿದೆ. ಇಂತಹ ಸಮಸ್ಯೆಯನ್ನು ಸರಿಪಡಿಸಲು ಪರೀಕ್ಷೆಯ ಪ್ರಾರಂಭಕ್ಕೆ ಮುಂಚಿತವಾಗಿಯೇ ಉಪ ನಿರ್ದೇಶಕರು ಎಲ್ಲಾ ಎಚ್ಚರಿಕೆಯನ್ನು ವಹಿಸಬೇಕಾಗಿದ್ದರೂ ಸಹ ಅವರ ಕರ್ತವ್ಯನಿರ್ಲಕ್ಷತೆಯಿಂದಾಗಿ ಇಂತಹ ಅನಾನುಕೂಲ ಹಾಗೂ ಗೊಂದಲಕ್ಕೆ ಅಭ್ಯರ್ಥಿಗಳು ಸಿಕ್ಕಿಕೊಳ್ಳಲು ಕಾರಣವಾಗಿದೆ.

6. ಆರೋಪ-2 ಕ್ಕೆ ಸಂಬಂಧಿಸಿದಂತೆ ಶ್ರೀಮತಿ ನೇತ್ರಾವತಿ ಎಂಬ ಅಭ್ಯರ್ಥಿಯು ದಿನಾಂಕ:21.10.2001 ರಂದು ಪರೀಕ್ಷಾ ಕೇಂದ್ರಕ್ಕೆ ಬಂದಾಗ ಆಕೆಯ ನೊಂದಣಿ ಸಂಖ್ಯೆಯು ಯಾವ ಕೇಂದ್ರದಲ್ಲಿಯೂ ಇಲ್ಲದೆ ಇರುವ ಪ್ರಯುಕ್ತ ಹಾಗೂ ಯಾವುದೇ ಮಾರ್ಗದರ್ಶನ ಇಲ್ಲದೆ ಮಾನಸಿಕ ಹಿಂಸೆಗೆ ಒಳಗಾಗಿ ಪರೀಕ್ಷೆಯನ್ನು ಬರೆಯಲು ಅವಕಾಶ ನೀಡಿದ್ದರೂ ಸಹ ಇಂತಹ ಸಮಸ್ಯೆಯಿಂದಾಗಿ ಪರೀಕ್ಷೆಯು ನಡೆದ ದಿನಾಂಕದ ಮರುದಿನ ಅಂದರೆ ದಿ:29.10.2001 ರಂದು ಇದೇ ಕಾರಣದಿಂದಾಗಿ ಆತ್ಮಹತ್ಯೆ ಮಾಡಿಕೊಂಡಿರುವುದಾಗಿ ದಿನಾಂಕ:3.11.2001 ರಂದು ಕಡೂರು ಕ್ಷೇತ್ರದ ಶಾಸಕರಾದ ಶ್ರೀ ಕೆ.ಎಂ.ಕೃಷ್ಣಮೂರ್ತಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದೂರಿನ ಪತ್ರದಿಂದ ಕಂಡುಬಂದಿದೆ. ಸದರಿ ಅಭ್ಯರ್ಥಿಯ ಅಂಕಪಟ್ಟಿಯಲ್ಲಿನ ಅಂಕಗಳನ್ನು ಅವಗಾಹಿಸಿದಾಗ ಸದರಿ ಅಭ್ಯರ್ಥಿಯು ಎಸ್.ಎಸ್.ಎಲ್.ಸಿ ಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿದ್ದು, ಪ್ರಥಮ ಟಿ.ಸಿ.ಹೆಚ್. ಹಾಗೂ ದ್ವಿತೀಯ ಟಿ.ಸಿ.ಹೆಚ್. ಪರೀಕ್ಷೆಯಲ್ಲಿ distinction ನಲ್ಲಿ ತೇರ್ಗಡೆ ಹೊಂದಿದ್ದು, ಇಂತಹ ಪ್ರತಿಭಾವಂತೆ ಅಭ್ಯರ್ಥಿಯು ಪರೀಕ್ಷೆ ನಡೆದ ಮರುದಿನವೇ ಆತ್ಮಹತ್ಯೆ ಮಾಡಿಕೊಳ್ಳಲು, ಆಕೆಗೆ ಪರೀಕ್ಷಾ ಕೇಂದ್ರದಲ್ಲಿ ಆಗಿರುವ ಮಾನಸಿಕ ಹಿಂಸೆ ಹಾಗೂ ಅಧಿಕಾರಿಗಳ ಅಸಭ್ಯ ವರ್ತನೆಯಿಂದ ಆಗಿದೆ ಎಂಬುದು ಖಚಿತಪಡುತ್ತದೆ. ಹಾಗೂ ಇಂತಹ ಸನ್ನಿವೇಶ ಸೃಷ್ಠಿಸಲು ಉಪನಿರ್ದೇಶಕರು ಹಾಗೂ ಶಿಕ್ಷಣಾಧಿಕಾರಿಗಳು ನೇರ ಕಾರಣರಾಗುತ್ತಾರೆ.

ಆದ್ದರಿಂದ ಮೇಲೆ ನಮೂದಿಸಿದ ಕಾರಣದಿಂದಾಗಿ ವಿಚಾರಣಾಧಿಕಾರಿಗಳು ಸಿಸಿಎ ನಿಯಮ 11 ರಡಿಯಲ್ಲಿ ಸರಿಯಾಗಿ ವಿಚಾರಣೆ ನಡೆಸದೆ ವರದಿ ಸಲ್ಲಿಸಿರುವುದರಿಂದ ಮುಂದುವರಿದ ವಿಚಾರಣೆ ನಡೆಸಲು ಪ್ರಕರಣವನ್ನು ವಿಚಾರಣಾಧಿಕಾರಿಯವರಿಗೆ ಹಿಂದಿರುಗಿಸುವುದು ಅವಶ್ಯಕವಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 169 ಡಿಜಿಡಿ 2001, ಬೆಂಗಳೂರು ದಿನಾಂಕ:19ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಎಸ್.ಎಸ್.ಕಬ್ಬೂರ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾಂ, ಮತ್ತು ಶ್ರೀಮತಿ ಶೋಭಾ ಡಿ.ಬಾಗೇವಾಡಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೀದರ್ ಇವರುಗಳ ಮೇಲಿನ ಆರೋಪಗಳಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11-ಎ ಮೇರೆಗೆ ಮುಂದುವರಿದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯಾದ ಶ್ರೀ ಭಾಸ್ಕರಯ್ಯ, ನಿರ್ದೇಶಕರು,(ಪ್ರಾಥಮಿಕ ಶಿಕ್ಷಣ) ಆಯುಕ್ತರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಪ್ರಕರಣವನ್ನು ಹಿಂದಿರುಗಿಸಿದೆ. ಶ್ರೀ ಎಂ.ಎಸ್.ಪಾಟೀಲ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ ಜಿಲ್ಲೆ, ಇವರೇ ಮಂಡನಾಧಿಕಾರಿಯಾಗಿ ಮುಂದುವರಿಯುತ್ತಾರೆ.

ವಿಚಾರಣಾಧಿಕಾರಿಗಳು ಮುಂದುವರಿದ ವಿಚಾರಣಾ ವರದಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 1 ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಒಪ್ಪಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.(ಸೇ-1,2)

ಪಿ.ಆರ್. 1359

**ವಿಷಯ:** ಶ್ರೀ ಬಿ.ಎಂ.ಮುಲ್ಲಾ, ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಬಾಲಕರ, ರಾಯಚೂರು, ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಧಿಕಾರಿಯವರನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಇಡಿ 5 ಡಿಜಿಡಿ 2002 ದಿ:3.8.2004
2. ಶ್ರೀ ಬಿ.ರುದ್ರಪ್ಪ, ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ರಾಯಚೂರು, ಇವರ ಪತ್ರ ಸಂ:ಉನಿ:14:2004-05 ದಿನಾಂಕ:13.9.2004

**ಪ್ರಸ್ತಾವನೆ:**

ಶ್ರೀ ಬಿ.ಎಂ.ಮುಲ್ಲಾ ಇವರು ಈ ಹಿಂದೆ ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ಸಿಂಧನೂರು, ಇಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ್ದರೆನ್ನಲಾದ ಆರೋಪಗಳಿಗೆ ವಿಚಾರಣೆ ನಡೆಸಲು ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ರಾಯಚೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು, ಇವರನ್ನು ಮಂಡನಾಧಿಕಾರಿಯಾಗಿ ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ: 3.8.2004 ರ ಸರ್ಕಾರಿ ಆದೇಶದ ಮೂಲಕ ನೇಮಕ ಮಾಡಲಾಗಿತ್ತು. ವಿಚಾರಣಾಧಿಕಾರಿಯಾದ ಉಪನಿರ್ದೇಶಕರಾದ ಶ್ರೀ ಬಿ.ರುದ್ರಪ್ಪ ಇವರು ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ:13.9.2004 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ಅವರು ದಿನಾಂಕ: 28.2.2005 ರಂದು ನಿವೃತ್ತಿ ಹೊಂದಲಿರುವುದರಿಂದ ಪಿಂಚಣಿ ದಾಖಲೆಗಳ ಸಿದ್ಧತೆ ಮಾಡಿಕೊಳ್ಳಲು ಹಾಗೂ ಹಕ್ಕಿನಲ್ಲಿರುವ ರಜೆಯನ್ನು ಉಪಯೋಗಿಸಿಕೊಳ್ಳಲು ಹಾಗೂ ದ್ವಿತೀಯ ಪಿಯುಸಿ ಸಪ್ಲಿಮೆಂಟರಿ ಪರೀಕ್ಷೆಯ ನಿಮಿತ್ತ ಸಿದ್ಧತೆ ಮಾಡಿಕೊಳ್ಳಲು ಕಾಲಾವಕಾಶ ಬೇಕಾಗಿರುವುದರಿಂದಲೂ ಬೇರೊಬ್ಬರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡುವಂತೆ ಕೋರಿದ್ದರು.

ಶ್ರೀ ಬಿ.ರುದ್ರಪ್ಪ, ಉಪನಿರ್ದೇಶಕರು, ಇವರ ಮನವಿಯಲ್ಲಿನ ಅಂಶಗಳನ್ನು ಪರಿಶೀಲಿಸಿದ ನಂತರ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ವಿಚಾರಣಾಧಿಕಾರಿಯವರನ್ನು ಬದಲಾಯಿಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 5 ಡಿಜಿಡಿ 2002, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಬಿ.ಎಂ.ಮುಲ್ಲಾ, ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಬಾಲಕರ, ರಾಯಚೂರು, ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 (2) ರ ಮೇರೆಗೆ ಉಪನಿರ್ದೇಶಕರು, ಪದವಿ ಪೂರ್ವ ಮತ್ತು ವೃತ್ತಿ ಶಿಕ್ಷಣ ಇಲಾಖೆ, ರಾಯಚೂರು, ಇವರನ್ನು ದಿನಾಂಕ:3.8.2004 ಸಂಖ್ಯೆ:ಇಡಿ 5 ಡಿಜಿಡಿ 2002 ರ ಆದೇಶದ ಮೂಲಕ ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿರುವುದನ್ನು ಬದಲಾಯಿಸಿ, ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು **ಶ್ರೀ ಜಿ.ಆರ್.ನರಸಿಂಹಮೂರ್ತಿ, ಉಪನಿರ್ದೇಶಕರು, ಪದವಿ ಪೂರ್ವ ಹಾಗೂ ವೃತ್ತಿ ಶಿಕ್ಷಣ ಇಲಾಖೆ, ಕೊಪ್ಪಳ,** ಇವರನ್ನು ವಿಚಾರಣಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಿದೆ. ಶಿಕ್ಷಣಾಧಿಕಾರಿ ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು, ಇವರನ್ನೇ ಮಂಡನಾಧಿಕಾರಿಯನ್ನಾಗಿ ಮುಂದುವರೆಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಪ್ರತಿಯೊಂದು ಆರೋಪಗಳಿಗೆ ಸಿಸಿಎ ನಿಯಮಗಳನ್ವಯ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 2 ತಿಂಗಳೊಳಗಾಗಿ ತಪ್ಪದೆ ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.(ಸೇ-1,2)

ಪಿ.ಆರ್. 1360

## ENERGY SECRETARIAT

**Subject:** Cancellation of permission given to M/s. A. Prabhakar Reddy & Co., Hyderabad to set up 5 MW Mini hydel power project at Narayanapura Dam near Rodalbanda in Raichur District.

**Read:**
1. G.O.No: DE 125 NCE 96 (14) dated: 10.6.1997.
2. Letter No: K.R.E.D./06/Rodalabanda/2004/1902, dated: 26.10.2004 of the Managing Director, Karnataka Renewable Energy Development Ltd., Bangalore.
3. Show-cause Notice No. EN 369 NCA 2004, dated: 17.11.2004.

**PREAMBLE:**

The Government of Karnataka in its order dated: 10.6.1997 cited (1) above have accorded permission to M/s A. Prabhakar Reddy & Co., Hyderabad to set up 5 MW Mini hydel power project at Narayanapura Dam near Rodalbanda in Raichur District.

2. The Managing Director, Karnataka Renewable Energy Development Ltd., in his letter dated: 26.10.2004 cited (2) above has recommended for cancellation of the permission given in the Government Order dated: 10.6.1997 on the ground that the developer has not shown any progress and has therefore recommended for cancellation of the permission given after issue of notice.

3. Accordingly, the recommendation of the Managing Director, KREDL was examined.

4. M/s. A. Prabhakar Reddy & Company, Hyderbad, was issued a Show-cause notice by the Government on 17.11.2004 cited (3) above, as to why the permission in the Government Order dated 10.6.1997 to set Mini hydel project, should not be cancelled for not showing progress in the implementation of the project.

5. M/s. A. Prabhakar Reddy & Company, has not responded to the Show-cause notice dated 17.11.2004 cited (3) above.

6. Hence, the order

**GOVERNMENT ORDER No. EN 369 NCE 2004, Bangalore, Dated: 8th December 2004**

In the circumstances explained above, Government hereby cancel the permission given to M/s. A. Prabhakar Reddy & Co., Hyderabad to set up a 5 MW Mini hydel power project at Narayanapura Dam near Rodalbanda in Raichur District in the Government Order No. DE 125 NCE 97 (14) dated 10.6.1997, with immediate effect.

By Order and in the Name of the Governor of Karnataka,
**K.L. JAYARAM**
Under Secretary to Government, Energy Department.

P.R. 1370

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರ ನಿರ್ದೇಶಕರ ಮಂಡಳಿಗೆ ಪುನರ್‌ರಚನೆಯ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಕೃತೋಇ 275 ಕೃಉಇ 2002, ದಿನಾಂಕ: 25–06–2002.
2. ಸರ್ಕಾರದ ಆದೇಶ ಸಂ: ಕೃತೋಇ 682 ಕೃಉಇ 2003, ದಿನಾಂಕ:12–10–2004.
3. ಪತ್ರ ಸಂ: ಕತೊಅಮಂ/ಬೋಡ್ಸ್/2004–05 ದಿನಾಂಕ: 26–11–2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ 9 ಮಂದಿ ಅಧಿಕಾರಿ ನಿರ್ದೇಶಕರನ್ನು ನೇಮಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 8 ಮಂದಿ ಅಧಿಕಾರಿ ನಿರ್ದೇಶಕರನ್ನು ನೇಮಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ (3) ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು,

ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯವರು ತಮ್ಮ ಪತ್ರದಲ್ಲಿ ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯ ನಿರ್ದೇಶಕರ ವಿವರಗಳುಳ್ಳ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಅದರಂತೆ ಈ ಕೆಳಗಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 682 ಕೃಉಇ 2003, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

ಮುಂದುವರಿದಂತೆ ಮಾರ್ಪಡಿಸಿದ ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಪ್ರಕರಣ 13 ಹಾಗೂ 14 (2) (ಎ) (11) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರಾಜ್ಯ ಸರ್ಕಾರವು ಈ ಕೆಳಕಂಡ ಅಧಿಕಾರಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿ ಆದೇಶ ಹೊರಡಿಸಿದೆ.

| ಕ್ರ. ಸಂ | ಕೃತೋಇ 275 ಕೃಉಇ 2002ರನ್ವಯ ನೇಮಿಸಿರುವ ಅಧಿಕಾರಿ/ನಿರ್ದೇಶಕರುಗಳ ವಿವರ | ಈಗ ನೇಮಿಸಲಾಗಿರುವ ಅಧಿಕಾರಿ/ನಿರ್ದೇಶಕರುಗಳ ವಿವರ |
|---|---|---|
| 1. | ಡಾ.ಎಸ್.ಸುಬ್ರಹ್ಮಣ್ಯ, ಭಾ.ಆ.ಸೇ, ಕೃಷಿ ಆಯುಕ್ತರು, ಬೆಂಗಳೂರು | ಶ್ರೀ ಎ.ಹನುಮಂತಯ್ಯ, ಜಂಟಿ ಕೃಷಿ ನಿರ್ದೇಶಕರು, ಗುಲಬರ್ಗಾ, ಜಂಟಿ ಕೃಷಿ ನಿರ್ದೇಶಕರ ಕಾರ್ಯಾಲಯ,ಜಿಲ್ಲಾ ಪಂಚಾಯತ್ ಸಭಾಂಗಣದ ಹತ್ತಿರ,ಗುಲಬರ್ಗಾ–1. |
| 2. | ಶ್ರೀ ಸೈಯದ್ ಜಮೀರ್ ಪಾಷಾ, ಭಾ.ಆ.ಸೇ., ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ, ಬೆಂಗಳೂರು. | ಶ್ರೀ ವಿಠಲ ಪೂಜಾರ, ಜಂಟಿ ನಿರ್ದೇಶಕರು,ಕೃಷಿ ಮಾರಾಟ ಇಲಾಖೆ, ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ನೆಹರು ಗಂಜ, ಗುಲಬರ್ಗಾ–4. |
| 3 | ಶ್ರೀ ಸಿದ್ಧಯ್ಯ, ಭಾ.ಆ.ಸೇ., ಸಹಕಾರ ಸಂಘಗಳ ಪ್ರಬಂಧಕರು, ಬೆಂಗಳೂರು. | ಶ್ರೀ ವಿಠಲ ಭೋಲೆ, ಡೆಪ್ಯುಟಿ ಜನರಲ್ ಮ್ಯಾನೇಜರ್,ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಸಹಕಾರ ಮಾರಾಟ ಮಹಾ ಮಂಡಳಿ, ನೆಹರು ಗಂಜ, ಗುಲಬರ್ಗಾ–4. |
| 4. | ಶ್ರೀ ಎಸ್.ಮೆಹತಾ, ಚೀಫ್ ಜನರಲ್ ಮ್ಯಾನೇಜರ್ (ಮುಖ್ಯ ಪ್ರಧಾನ ವ್ಯವಸ್ಥಾಪಕರು),ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಬ್ಯಾಂಕ್(ನಬಾರ್ಡ್) ಬೆಂಗಳೂರು. | ಶ್ರೀ ಎಸ್.ಜಿ.ಮುತಾಲಿಕ, ಜಿಲ್ಲಾ ಅಭಿವೃದ್ಧಿ ಅಧಿಕಾರಿ, ನಬಾರ್ಡ್, ರಾಷ್ಟ್ರೀಯ ಕೃಷಿ ಅಭಿವೃದ್ಧಿ ಬ್ಯಾಂಕ್, ಗೋದುತಾಯಿ ನಗರ, ಜೇವರ್ಗಿ ರಸ್ತೆ, ಗುಲಬರ್ಗಾ–3. |
| 5. | ಶ್ರೀ ಹೆಚ್.ರವಿಂದ್ರನಾಥ್,ಪ್ರಧಾನ ವ್ಯವಸ್ಥಾಪಕರು ಸಿಂಡಿಕೇಟ್ ಬ್ಯಾಂಕ್ ಹಾಗೂ ಸಂಚಾಲಕರು, ರಾಜ್ಯ ಮಟ್ಟದ ಬ್ಯಾಂಕರುಗಳ ಸಮಿತಿ, 2ನೇ ಅಡ್ಡರಸ್ತೆ, ಗಾಂಧಿನಗರ, ಬೆಂಗಳೂರು–9. | ಶ್ರೀ ಪಿ.ಆರ್.ಭಂಡಾರಿ, ವ್ಯವಸ್ಥಾಪಕರು, ಲೀಡ್ ಬ್ಯಾಂಕ್, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಐವಾನ–ಇ–ಶಾಹಿ ರೋಡ್, ಗುಲಬರ್ಗಾ–2. |
| 6. | ಡಾ:ಪಿ.ಎಸ್.ಧರ್ಮರಾಜ, ಧಾರವಾಡ ಕೃಷಿ ವಿಶ್ವವಿದ್ಯಾನಿಲಯ, ದ್ವಿದಳಧಾನ್ಯಗಳು, ಮುಖ್ಯ ವಿಜ್ಞಾನಿ, ಗುಲ್ಬರ್ಗಾ. | ಡಾ:ಪಿ.ಎಸ್.ಧರ್ಮರಾಜ, ಧಾರವಾಡ ಕೃಷಿ ವಿಶ್ವವಿದ್ಯಾನಿಲಯ, ದ್ವಿದಳಧಾನ್ಯಗಳು, ಮುಖ್ಯ ವಿಜ್ಞಾನಿ, ಗುಲ್ಬರ್ಗಾ. |
| 7. | ಡಾ: ಆರ್.ಟಿ.ಕಾಮತ್, ಅಪರ ಕೃಷಿ ನಿರ್ದೇಶಕರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿ ನಿಯಮಿತ, ಚಂದ್ರಶೇಖರ ಪಾಟೀಲ ನಗರ, ನೀಲಕಂಠ ಪಾಟೀಲ ರೋಡ್, ಗುಲಬರ್ಗಾ–2. | ಡಾ: ಆರ್.ಟಿ.ಕಾಮತ್, ಅಪರ ಕೃಷಿ ನಿರ್ದೇಶಕರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿ ನಿಯಮಿತ, ಚಂದ್ರಶೇಖರ ಪಾಟೀಲ ನಗರ, ನೀಲಕಂಠ ಪಾಟೀಲ ರೋಡ್, ಗುಲಬರ್ಗಾ–2. |
| 8 | **ಹೊಸದಾಗಿ ನೇಮಿಸಲಾಗಿರುವ ನಿರ್ದೇಶಕರುಗಳು** | ಶ್ರೀ ಅಂಜುಮಪರ್ವೇಜ, ಭಾ.ಆ.ಸೇ., ಜಿಲ್ಲಾಧಿಕಾರಿಗಳು, ಗುಲ್ಬರ್ಗಾ, ವಿಕಾಸಭವನ, ಮುಖ್ಯರಸ್ತೆ, ಗುಲ್ಬರ್ಗಾ–2. |
| 9 | **ಹೊಸದಾಗಿ ನೇಮಿಸಲಾಗಿರುವ ನಿರ್ದೇಶಕರುಗಳು** | ಶ್ರೀ ಎಂ.ಎಸ್.ಶ್ರೀಕರ, ಭಾ.ಆ.ಸೇ., ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್, ಗುಲಬರ್ಗಾ, ಜಿಲ್ಲಾ ಪಂಚಾಯತ್ ಕಾರ್ಯಾಲಯ, ಮುಖ್ಯ ರಸ್ತೆ, ಗುಲಬರ್ಗಾ–1. |
| 10 | ಶ್ರೀ ಗುರುಚರಣ್, ಭಾ.ಆ.ಸೇ., ಕೈಗಾರಿಕಾ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ. | ರದ್ದುಗೊಳಿಸಲಾಗಿದೆ. |
| 11 | ಡಾ.ಎಂ.ಭೈರೇಗೌಡ, ಮುಖ್ಯ ವಿಜ್ಞಾನಿ, (ದ್ವಿದಳ ಧಾನ್ಯಗಳು) ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು. | ರದ್ದುಗೊಳಿಸಲಾಗಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಪಿ.ಆರ್. 1371 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject:** Reconstitution of State Environmental Clearance Committee (SECC)-issue of orders-regarding.

**Read:**
1. Government Order No. FEE 297 ENV 93, dated: 21.01.94.
2. Government Order No. FEE 14 ENV 2000, dated: 31.12.2001.
3. Government Order No. FEE 130 ENV 2002, dated: 24.10.2002.
4. MOEF, GOI-EIA Notification No. S.O.801(E) dated: 7.7.2004.

**PREAMBLE:**

In the Government Order referred at (1) above, the Department had constituted State Environmental Clearance Committee (SECC) to regulate the Industrial Projects established in the State from the environment protection angle. In the Government Order referred at (2) above, the Government

had committed to reconstitute the State Environmental Clearance Committee to include a professional mix of administrators, experts with knowledge and competence in the areas of (i) eco system management, (ii) Air/Water pollution control; (iii) Water resource management (iv) Flora/fauna conservation and management (v) Land use planning (vi) Social Sciences Rehabilitation (vii) Ecology and Environment health (viii) Representation of NGOs and persons concerned with environment issues. In the Government Order referred at (3) above, the State Environmental Clearance Committee was reconstituted. In the Notification referred at (4) above, Ministry of Environment and Forests, Govt. of India has issued amendment to EIA Notification enlarging the scope, content and importance of environmental clearances thereby keeping a strict vigil on the activities, Consequential to these changes, need for including some more members to State Environmental Clearance Committee has been felt. Hence this order.

**GOVERNMENT ORDER No. FEE 129 ECO 2004, Bangalore, Dated: 7th December 2004**

In the facts and circumstances explained in the preamble, the Government is pleased to reconstitute the State Environmental Clearance Committee with the following members:

| | | |
|---|---|---|
| 1. | Principal Secretary to Government, Department of Forest, Ecology & Environment, 404, 4th Floor, M.S. Building, Bangalore-560 001. | Chairperson |
| 2. | Principal Secretary to Government, Urban Development Department, 4th Floor, M.S. Building, Bangalore. | Member |
| 3. | Secretary to Government, (Ecology and Environment), Department of Forest, Ecology & Environment, 709, 7th Floor, M.S.Building, Bangalore-560 001 | Member |
| 4. | Secretary to Government, (Forest), Department of Forest, Ecology & Env. Department, 704, 7th Floor, M.S. Building, Bangalore-560 001. | Member |
| 5. | Secretary to Government, (Major Irrigation), Water Resources Department, 640, 6th Floor, M.S. Building, Bangalore. | Member |
| 6. | Commissioner, Bangalore Mahanagar Palike, Bangalore. | Member |
| 7. | Commissioner, Bangalore Development Authority, Bangalore. | Member |
| 8. | Commissioner for Industrial Development and Director, Industries and Commerce Department, Khanija Bhavan, Race Course Road, Bangalore-560 001. | Member |
| 9. | Chairman, Karnataka State Pollution Control Board, Public Utility Building, 8th Floor, M.G. Road, Bangalore - 560 001. | Member |
| 10. | Chief Inspector of Factories and Boilers, Factories and Boilers Department, Karmika Bhavan, Industrial Training Centre Complex, Bannerghatta Road, Bangalore-560 029. | Member |
| 11. | Director, Department of Mines and Geology, Khanija Bhavan, Race Course Road, Bangalore - 560 001. | Member |
| 12. | Zonal Officer, Central Pollution Control Board, No.6, West of Chord Road, Mahalakshmipuram, II Stage, Rajajinagar, Bangalore - 560 086. | Member |
| 13. | Director, Town Planning Department, 113, Ground Floor, M.S. Building, Bangalore - 560 001. | Member |
| 14. | Controller of Drugs for the State of Karnataka, Palace Road, Bangalore-560 001. | Member |
| 15. | Sri P.R. Mallikarjuna, Kaladhara, No.62/1, 5th Main, 6th Cross, Chamarajpet, Bangalore-560 018. | Member |
| 16. | Prof. A.K. Lahiri, Department of Metallurgy, Indian Institute of Science, Malleswaram, Bangalore-560 012. | Member |
| 17. | Sri P.P. Nageshwara Rao, Director, RRSSC, Antariksha Bhavan, New BEL Road, ISRO, Bangalore-560 094. | Member |
| 18. | Dr. Vasundhara Kamath, Prof. of Preventive and Social Medicine, Victoria Hospital, Fort, Bangalore - 560 002. | Member |
| 19. | Dr. R. Shailaja, Coordinator, Centre for Environment Education, 143, Kamala Mansion, Infantry Road, Bangalore - 560 001. | Member |
| 20. | Senior Director (Technical) (Ecology and Environment), Department of Forest, Ecology & Environment, 710, 7th Floor, M.S. Building, Bangalore-560 001. | Member - Secretary |

The duties and functions of the State Environment Clearance Committee (SECC) will remain the same as mentioned in Government Order referred at (2) above.

The reconstituted SECC will remain the same until further orders.

By Order and in the Name of the Governor of Karnataka,

**N.R. JAGANMATHA**

P.R. 1372

Under Secretary to Government,

Forest, Ecology & Environment Department.

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಶ್ರೀ ಸೈಯದ್ ಇಸ್ಪಾಕ್ ಅಹಮದ್, ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**

1. ಪೋಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರಸಂಖ್ಯೆ:ಲೋಕ್/ಐಎನ್‌ವಿ/ಜಿ/ಸಿಟಿ/ಕ್ರೈಂ.1/2004, ದಿನಾಂಕ:07–06–2004.
2. ತನಿಖಾಧಿಕಾರಿ, ಕರ್ನಾಟಕ ಲೋಕಾಯುಕ್ತ, ಇವರ ವರದಿ ದಿನಾಂಕ:26–03–2004.
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.
4. ಸರ್ಕಾರಿ ಆದೇಶ ಸಂಖ್ಯೆ:ವಾಕೈ 09 ಕೈಸೇವಿ 2004, ದಿನಾಂಕ:05–10–2004.
5. ಪೋಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ರವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ/ಜಿ/ಸಿಟಿ/ಕ್ರೈಂ.1/2004, ದಿನಾಂಕ:30–10–2004.

ಪ್ರಸ್ತಾವನೆ:–

1. ಶ್ರೀ ಸೈಯದ್ ಇಸ್ಪಾಕ್ ಅಹಮದ್, ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, (ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ) ಇವರ ವಿರುದ್ಧ ಗುನ್ನೆ ಸಂಖ್ಯೆ:ಲೋ.ಮಾ.1/2004ರಲ್ಲಿ ಆರಕ್ಷಕ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಪೋಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ 2 ಮತ್ತು 3) ಪೋಲೀಸ್ ಮಹಾನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ಸಂಖ್ಯೆ:ಲೋಕ್/ಐಎನ್‌ವಿ/ಜಿ/ಸಿಟಿ/ಕ್ರೈಂ.1/2004, ದಿನಾಂಕ: 07–06–2004 (ಉಲ್ಲೇಖ–1) ರೊಡನೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೆಯ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

2. ಸದರಿ ಕೋರಿಕೆಯಂತೆ ಶ್ರೀ ಸೈಯದ್ ಇಸ್ಪಾಕ್ ಅಹಮದ್, ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ನೀಡಲಾಗಿರುತ್ತದೆ. ಸದರಿ ಆದೇಶದಲ್ಲಿರುವ ನ್ಯೂನತೆಗಳನ್ನು ಸರಿಪಡಿಸಿ ಪರಿಷ್ಕರಿಸಿದ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ:5ರಲ್ಲಿ ಕೋರಲಾಗಿದೆ.

3. ಸರ್ಕಾರವು ಪೋಲೀಸ್ ಮಹಾನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಉಲ್ಲೇಖಿತ ಪತ್ರಸಂಖ್ಯೆ:ಲೋಕ್/ಐಎನ್‌ವಿ/ಜಿ/ಸಿಟಿ/ಕ್ರೈಂ.1/2004, ದಿ: 07–06–2004 ದೊಂದಿಗೆ ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

ಅ) ಶ್ರೀ ಸಮೀಉಲ್ಲಾ ಬಿನ್ ಸಯ್ಯದ್ ಚೋಟ್‌ಸಾಬ್, ನಂ.247, 4ನೇ ಕ್ರಾಸ್, ವಿನೋಬನಗರ, ಕೆ.ಜಿ.ಹಳ್ಳಿ ಪೋಲೀಸ್ ಠಾಣೆ, ಬೆಂಗಳೂರು, ದಿನಾಂಕ:02–01–2004.

ಆ) ಪ್ರಥಮ ವರ್ತಮಾನ ವರದಿ ಬೆಂಗಳೂರು (ಸ್ಥಳ) ಲೋಕಾಯುಕ್ತ ಪೋಲೀಸ್ ಠಾಣೆ ಪ್ರಕರಣ ಸಂಖ್ಯೆ:01/2004.

ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ:02–01–2004

ಈ) ಟ್ರ್ಯಾಪ್‌ನ ಮಹಜರ್ ದಿನಾಂಕ:02–01–2004.

ಉ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ:ಸಿಎಂಐ/ಲೋಕ್/54/2003–04.

**ಊ) ಕೃತ್ಯ ನಡೆದ ಸ್ಥಳದ ನಕಾಶೆ** : ತನಿಖಾಧಿಕಾರಿಯವರು ರಚಿಸಿರುವ ಕೃತ್ಯ ನಡೆದ ಸ್ಥಳದ ನಕಾಶೆಯನ್ನು ಅಂತಿಮ ವರದಿಯ ಪುಟ ಸಂಖ್ಯೆ. 52 ಹಾಗೂ 52ಎ ರಲ್ಲಿರುತ್ತದೆ.

**ಋ) ಸಾಕ್ಷಿಗಳ ಹೇಳಿಕೆಗಳು:**

1) ಶ್ರೀ ಸೈಯದ್ ಸಮೀವುಲ್ಲಾ ಬಿನ್ ಲೇಟ್ ಸೈಯದ್ ಚೋಟ್‌ಸಾಬ್, 37 ವರ್ಷ, ನಂ.247, 4ನೇ ಅಡ್ಡ ರಸ್ತೆ, ವಿನೋಬ ನಗರ, ಕೆ.ಜಿ.ಹಳ್ಳಿ, ಪೋಲಿಸ್ ಠಾಣೆ ಹಿಂಭಾಗ, ಬೆಂಗಳೂರು–45. (ವರದಿಯ ಪುಟ ಸಂಖ್ಯೆ:203 ರಿಂದ 213)

2) ಶ್ರೀ ಟಿ.ವಿ.ವಿಶುಕುಮಾರ್ ಬಿನ್ ಲೇಟ್ ವೆಂಕಟಸ್ವಾಮಯ್ಯ, 33 ವರ್ಷ, ಪ್ರ.ದ.ಸ., ಆಯುಕ್ತರ ಕಛೇರಿ, (ಸಿಬ್ಬಂದಿ – 3), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು–01. (ವರದಿಯ ಪುಟ ಸಂಖ್ಯೆ:214 ರಿಂದ 224)

3) ಶ್ರೀ ಬಿ.ಎಸ್.ಸುಧೀಂದ್ರ, ಹಿರಿಯ ಬೆರಳಚ್ಚುಗಾರ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಕೆ.ಆರ್.ಸರ್ಕಲ್, ಬೆಂಗಳೂರು. (ವರದಿಯ ಪುಟ ಸಂಖ್ಯೆ:225 ರಿಂದ 235)

4) ಶ್ರೀಮತಿ ಜರೀನಾ ತಾಜ್ ಕೋಂ ನಯೀಮುಲ್ಲಾ, 40 ವರ್ಷ, ಮನೆ ಸಂಖ್ಯೆ:72, 2ನೇ ಕ್ರಾಸ್, 2ನೇ ರಸ್ತೆ, ಹೆಲ್ತ್ ಆಫೀಸ್ ಎದುರುಗಡೆ, ಹೆಚ್.ಕೆ.ಪಿ.ರಸ್ತೆ, ಶಿವಾಜಿನಗರ, ಬೆಂಗಳೂರು–51. (ವರದಿಯ ಪುಟ ಸಂಖ್ಯೆ:236 ರಿಂದ 243)

5) ಶ್ರೀ ಚಂದ್ರಶೇಖರ್, ಪೋಲೀಸ್ ಕಾನ್ಸ್‌ಟೇಬಲ್, (ವರದಿಯ ಪುಟ ಸಂಖ್ಯೆ:244)

6) ಶ್ರೀ ಎಸ್.ಪಿ.ಪರಮೇಶ್, ಪೋಲಿಸ್ ಕಾನ್ಸ್‌ಟೇಬಲ್, (ವರದಿಯ ಪುಟ ಸಂಖ್ಯೆ.245)
7) ಶ್ರೀ ಎನ್.ವಿಷಕಂಠಯ್ಯ, ಪೋಲಿಸ್ ಕಾನ್ಸ್‌ಟೇಬಲ್, (ವರದಿಯ ಪುಟ ಸಂಖ್ಯೆ.246-247)
8) ಶ್ರೀ ವಿ.ಎನ್.ರಾಜಣ್ಣ, ಡಿ.ವೈ.ಎಸ್.ಪಿ., ನಗರ ಪೋಲಿಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು. (ವರದಿಯ ಪುಟ ಸಂಖ್ಯೆ.248)

ಎ) **ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳು:**

1) ಕರ್ನಾಟಕ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮದ ಕಡತ ರಿಕವರಿ ಏಜೆಂಟ್ಸ್ 2003-04
2) ಫಿರ್ಯಾದುದಾರರಿಗೆ ಸಂಬಂಧಿಸಿದ ಅಗ್ರಿಮೆಂಟ್ ಪತ್ರಗಳ ಕಡತ.

ಏ) **ಆಪಾದಿತರ ಸಮಜಾಯಿಷಿ ಹೇಳಿಕೆಗಳು**

4. ಆಪಾದಿತರಾದ ಶ್ರೀ ಸೈಯದ್ ಇಸ್ಫಾಕ್ ಅಹಮದ್, ಇವರು ಫಿರ್ಯಾದಿಯಾದ ಶ್ರೀ ಸಮೀಉಲ್ಲಾ ಬಿನ್ ಸೈಯದ್ ಚೂಟ್‌ಸಾಬ್, ನಂ.247, 4ನೇ ಕ್ರಾಸ್, ವಿನೋಬ ನಗರ, ಕೆ.ಜಿ.ಹಳ್ಳಿ ಪೋಲೀಸ್ ಠಾಣೆ, ಬೆಂಗಳೂರು, ಇವರಿಗೆ ಸಾಲ ವಸೂಲಾತಿ ಮಾಡುವ ಗುತ್ತಿಗೆ ಆದೇಶವನ್ನು ನೀಡಲು ರೂ.15,000.00ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು, ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:02-01-2004ರಂದು ಬೆಂಗಳೂರಿನಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಸೈಯದ್ ಇಸ್ಫಾಕ್ ಅಹಮದ್, ಇವರು ಅಕ್ರಮ ಸಂಭಾವನೆಯಾದ ರೂ.15,000.00 ಗಳನ್ನು ಸದರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಹಾಗೂ ಅವರ ಪ್ಯಾಂಟಿನ ಬಲ ಭಾಗದ ಜೇಬಿನ ಒಳಭಾಗವನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಫ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ಅಕ್ರಮ ಸಂಭಾವನೆಯಾದ ರೂ.15,000.00 ಗಳನ್ನು ಶ್ರೀ ಸೈಯದ್ ಇಸ್ಫಾಕ್ ಅಹಮದ್, ಇವರಿಂದ ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

5. ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಗೆ ಓದಲಾದ ಕಲಂ 13 (2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ, ಇವರನ್ನು ಲಂಚನಿರೋಧಕ ಕಾಯ್ದೆ 1988ರನ್ವಯ ಕಲಂ 7, 13 (1) (ಡಿ) ಜೊತೆಗೆ 13 (2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

6. ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿದೆ. ಆದ್ದರಿಂದ, ಲಂಚ ನಿರೋಧ ಕಾಯ್ದೆ 1988ರ ಕಲಂ 19 (1) (ಬಿ)ರ ಅಡಿ ಆಪಾದಿತ ನೌಕರನಾದ ಶ್ರೀ ಸೈಯದ್ ಇಸ್ಫಾಕ್ ಅಹಮದ್, ರವರನ್ನು ಕಲಂ 7 ಮತ್ತು 13 (1) (ಡಿ) ಜೊತೆಗೆ 13 (2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರವು ಈ ಕೆಳಕಂಡಂತೆ ಪರಿಷ್ಕರಿಸಿದ ಮಂಜೂರಾತಿ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 09 ಕೈಸೇವಿ 2004, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಆರೋಪಿಯಾದ ಶ್ರೀ ಸೈಯದ್ ಇಸ್ಫಾಕ್ ಅಹಮದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇಲೆ ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರನ್ನು ಜಂಟಿ ನಿರ್ದೇಶಕರ ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಶ್ರೀ ಸೈಯದ್ ಇಸ್ಫಾಕ್ ಅಹಮದ್, ಜಂಟಿ ನಿರ್ದೇಶಕರು, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಯಲ್ಲಿ ಓದಲಾದ ಕಲಂ 13 (2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಸದರಿ ಕಾಯ್ದೆಯ ಕಲಂ 19 (1) (ಬಿ) ರನ್ವಯ ಮಂಜೂರಾತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರನ್ವಯ ಈ ಮೇಲ್ಕಂಡ ಆದೇಶವನ್ನು ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ:08-12-2004ರಂದು ಹೊರಡಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ವಾಕೈ 09 ಕೈಸೇವಿ 2004, ದಿನಾಂಕ:05.10.2004 ನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 1373 ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಸೇವೆಗಳು)

## FINANCE SECRETARIAT

**Subject:** Introduction of performance based Incentive Scheme for the staff of KSBCL and Excise Department.

**Read:** Letter No.HRI-023/1604 dated 15-8-2004 received from the Managing Director, Karnataka State Beverages Corporation Ltd., Bangalore.

**PREAMBLE:-**

The Managing Director, KSBCL, Bangalore in his letter dated: 15-8-2004 read above has stated that, a scheme of rewarding staff of the Excise Department, wherein up to 10% of the value of the seized goods is paid as incentive is already in vogue as per G.O.No.FD 47 EAA 2003 dated 11-9-2003. In order to motivate enforcement officials and the staff of the Excise Department attached to KSBCL depots and the employees of the Corporation, the Board in its meeting held on 24-7-2004 discussed a performance based incentive scheme and approved the same. The Managing Director, KSBCL has sought approval of the Government to the said scheme with effect from 1-7-2004 and stated that this will motivate the staff of

the KSBCL and Excise Department to put in their best to achieve the targets fixed for each district. The salient features of the scheme are as under:

1. The incentive will be applicable to sale of IML only.
2. The Excise Commissioner in consultation with the Corporation would indicate month-wise, district-wise targets.
3. Performance will be evaluated every quarter to smoothen out inter month fluctuation.
4. A yearly evaluation would also be conducted for payment of a special incentive.
5. Incentive to the staff posted to the depots will be paid in the form of a fixed amount, depending on the level of performance achieved.
6. The district would be eligible for lump sum amount depending on the level of performance. This amount would be apportioned by the Excise Commissioner to individual officers.
7. The incentive paid to KSBCL staff would be accounted as expenditure by the Corporation. The incentive paid to the Excise Department staff (including the personnel posted in deports) would be accounted as advance privilege fee paid to the Government.
8. The likely expenditure in this regard would amount to Rs.50 lakhs which would amount to 0.86% of the incremental revenue that the Government would collect. In respect of the Corporation, the expenditure would be Rs.5.6 lakhs, amounting to 2.5% of the incremental margin amount earned.

After examining the proposal the following orders has been issued.

**GOVERNMENT ORDER No. FD 39 EAA 2004, Bangalore, dated: 25th November 2004**

Government are pleased to introduce an Incentive Scheme for better achievement of the targets fixed to the districts and the rules made thereunder for a period of six months from the date of issue of this order, as detailed vide Annexure-I and amount of incentive payable under this scheme shall be as in Annexure-II and for the purpose of this scheme districts shall classified as in Annexure-III appended to this order.

By Order and in the Name of the Governor of Karnataka,

**L.Sreenivasan**

Under Secretary to Government, Finance Department (Excise).

## ANNEXURE-I

## PERFORMANCE BASED INCENTIVE SCHEME

**1.00 Title**

1.01 This Scheme may be called 'The Karnataka State Beverages Corporation Ltd. Performance based Incentive Scheme'.

**2.00 Coverage**

2.01 Employees of the Corporation (including deputationists) working in the depots of the Corporation and the personnel of the Excise Department connected with the business of the Corporation as approved by the Excise Commissioner shall be covered in this Scheme.

**3.00 Definitions**

3.01 "Corporation" means the Karnataka State Beverages Corporation Ltd.

3.02 "Depot" means any distribution depot of the Corporation.

3.03 "District" means a revenue district of Karnataka and as classified in Annexure-II.

3.04 "Eligible employees" means employees who are eligible as per clause 4.02.

3.05 "Incentive" means the monetary reward payable to employees covered under this scheme.

3.06 "Quarter" means a period of three months commencing from the month of April every year.

3.07 "Year" means a period of twelve months commencing from the month of April.

**4.00 Fixing of targets**

4.01 For the purpose of this Scheme, the Excise Commissioner, in consultation with the Corporation shall fix monthly sales target for IML for each District.

4.02 Employees of the Corporation in a Depot or Depots in the District and personnel of the Excise Department working in that District would be eligible for the Incentive if the District achieves a level of performance as may be specified from time to time.

**5.00 Evaluation of Performance**

5.01 Performance of a District will be evaluated every Quarter against the target fixed for that District for that Quarter and shall be expressed as a percentage of the target fixed.

5.02 In addition to the evaluation as per 5.01 above, the yearly performance of the district shall be evaluated against the target fixed for the Year and shall be expressed as a percentage of the target fixed.

5.03 For the purpose of evaluation, the achievement of IML alone shall be considered.

**6.00 Quantum of Incentive and payment.**

6.01 The Managing Director of the Corporation and the Excise Commissioner shall be the authority to sanction incentive to eligible employees of the Corporation and personnel of the Excise Department respectively. The quantum of Incentive payable to eligible employees shall be as per the Annexure-I to this Scheme.

6.02 The Excise Commissioner shall indicate the eligible employees in a District to whom the incentive amount as per column 3 or 4 or 5, as the case may be, in Annexure I, shall be apportioned. The Corporation shall thereafter release the amount as per the orders of the Excise Commissioner.

6.03 Incentive shall be paid during the month of April, July, October & January of every year in respect of the quarters ending March, June, September & December respectively.

**7.00 Special Incentive**

7.01 A District which achieves a yearly performance of 100% shall be eligible for a special incentive to be fixed at the end of the year.

**8.00 Accounting by the Corporation**

8.01 Any Incentive amount paid to the staff of the Corporation shall be separately accounted for by it as expenditure of the Corporation.

8.02 Incentive paid to the personnel of the Excise Department shall be treated as advance payment of privilege fee levied by the Government under Section 24 of the Karnataka Excise Act 1965.

**9.00 Changes to the Scheme**

9.01 The Managing Corporation shall, with the prior approval of the Government, effect any changes to this Scheme as deemed fit from time to time.

**10.0 Removal of doubts**

10.01 Any difficulties on the implementation of this Scheme shall be decided jointly by the Excise Commissioner and the Managing Director of the Corporation.

**L.Sreenivasan**

Under Secretary to Government, Finance Department (Excise).

**ANNEXURE-II**

**AMOUNT OF INCENTIVE PAYABLE**

| Sl. No. | Performance level as a percentage of the target. | Amount of Incentive payable to | | | |
|---|---|---|---|---|---|
| | | District Excise staff | | | Staff of the Corpn. & Excise staff attached to the depot |
| | | Group 'A' dists. | Group 'B' dists. | Group 'C' dists. | |
| 1 | 2 | 3 | 4 | 5 | 6 |
| | | | (Per District) Rs. | | (Per employee) Rs. |
| 1 | up to 75% | 10000 | 8000 | 5000 | 250 |
| 2 | 76 to 80% | 15000 | 10000 | 8000 | 300 |
| 3 | 81 to 85% | 20000 | 15000 | 12000 | 400 |
| 4 | 86 to 87% | 25000 | 20000 | 16000 | 500 |
| 5 | 88 to 89% | 30000 | 25000 | 22000 | 600 |
| 6 | 90 to 91% | 40000 | 35000 | 32000 | 700 |
| 7 | 92 to 95% | 60000 | 50000 | 47000 | 800 |
| 8 | 96 to 98% | 75000 | 65000 | 62000 | 1000 |
| 9 | 99 to 100% | 100000 | 90000 | 87000 | 1500 |
| 10 | Above 100% | 100000 + 50000 for every 1% increase | 90000 + 45000 for every 1% increase | 87000 + 40000 for every 1% increase | 1500 + 500 for every 1% increase |

**L.Sreenivasan**

Under Secretary to Government, Finance Department (Excise).

## ANNEXURE – III
## CLASSIFICATION OF DISTRICTS

| Group 'A' districts | Group 'B' districts | Group 'C' districts | |
|---|---|---|---|
| 1. Bangalore Urban | 1. Kolar | 1. Chitradurga | 10. Raichur |
| 2. Bangalore Rural | 2. Tumkur | 2. Davangere | 11. Kodagu |
| | 3. Belgaum | 3. Bagalkot | 12. Shimoga |
| | 4. Bellary | 4. Bijapur | 13. Uttara Kannada |
| | 5. Gulbarga | 5. Dharwar | 14. Chamarajnagar |
| | 6. Dakshina Kannada | 6. Gadag | 15. Chikmagalur |
| | 7. Udupi | 7. Haveri | 16. Hassan |
| | 8. Mysore | 8. Bidar | 17. Mandya. |
| | | 9. Koppal | |

**L.Sreenivasan**
P.R. 1374 Under Secretary to Government, Finance Department (Excise).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಹರಪನಹಳ್ಳಿ ತಾಲ್ಲೂಕಿನ ಅಣಬಗೆರೆ ಗ್ರಾಮ ಪಂಚಾಯತಿಯಲ್ಲಿ ನಿರ್ಮಲ ಕರ್ನಾಟಕ ಯೋಜನೆ ಅಡಿ ಶೌಚಾಲಯಗಳ ನಿರ್ಮಾಣದಲ್ಲಿ ನಡೆದಿರುವ ಅಕ್ರಮಗಳಿಗೆ ಕಾರಣರಾದ ನೌಕರರ ವಿರುದ್ದದ ಜಂಟಿ ಇಲಾಖಾ ವಿಚಾರಣೆ-ದಂಡನೆ ವಿಧಿಸುವ ಬಗ್ಗೆ- ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಬಳ್ಳಾರಿ,ಇವರ ಪತ್ರ ಸಂಖ್ಯೆ:ಜಿಪಂಬ:ಆದೇಶ:ಸಿಸಿಎ: 19:96-97 ದಿ:22-7-97.
2. ಆಪಾದಿತರಿಗೆ ಜಾರಿಗೊಳಿಸಿರುವ ಕಾರಣ ಕೇಳುವ ನೋಟಿಸ್ ಸಂಖ್ಯೆ: ಗ್ರಾಅಪ 92 ಇಎನ್‌ಕ್ಯೂ 97,ದಿ:3-4-98.
3. ಆಪಾದಿತರಾದ ಶ್ರೀ.ಕೆ.ಸೋಮಾಚಾರಿ ಇವರ ದಿ:5-7-98ರ ಲಿಖಿತ ಹೇಳಿಕೆ.
4. ಆದೇಶ ಸಂಖ್ಯೆ:ಗ್ರಾಅಪ 92 ಇಎನ್‌ಕ್ಯೂ 97, ದಿ:7-1-2000.
5. ವಿಚಾರಣಾಧಿಕಾರಿಗಳ ದಿ:27-12-2003ರ ವಿಚಾರಣಾ ವರದಿ.
6. ಆಪಾದಿತರಿಗೆ ಜಾರಿಗೊಳಿಸಲಾದ ಎರಡನೇ ಕಾರಣ ಕೇಳುವ ನೋಟಿಸ್ ದಿ:26-3-2004.
7. ಆಪಾದಿತರಾದ ದಿವಂಗತ ಸೋಮಾಚಾರಿ ಇವರ ಪತ್ನಿಯಾದ ಶ್ರೀಮತಿ.ವಿಶಾಲಕ್ಷಮ್ಮ ಇವರ ಲಿಖಿತ ಹೇಳಿಕೆ.
8. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ:ಪಿಎಸ್‌ಸಿ 54 ಸಿಎಸ್‌ಎಸ್ 2004, ದಿ:15-10-2004.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಬಳ್ಳಾರಿ,ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಹರಪನಹಳ್ಳಿ ತಾಲ್ಲೂಕಿನ ಅಣಬಗೆರೆ ಗ್ರಾಮ ಪಂಚಾಯತಿಯಲ್ಲಿ ನಿರ್ಮಲ ಕರ್ನಾಟಕ ಯೋಜನೆಅಡಿ ಶೌಚಾಲಯಗಳನ್ನು ನಿರ್ಮಾಣ ಮಾಡದೆ ಅಣಬಗೆರೆ ಹಾಗೂ ಜಂಗಮ ತುಂಬಿಗೆರೆ ಗ್ರಾಮಗಳಲ್ಲಿ ಕ್ರಮವಾಗಿ 51 ಜನರಿಗೆ ಹಾಗೂ 31 ಜನರಿಗೆ ಒಟ್ಟು ರೂ.93,300-00ಗಳನ್ನು ಸಹಾಯಧನ ರೂಪದಲ್ಲಿ ಮಂಜೂರು ಮಾಡಿ ಸರ್ಕಾರಕ್ಕೆ ನಷ್ಟ ಉಂಟಾಗಲು ಕಾರಣರಾದ ಶ್ರೀ.ಸೋಮಾಚಾರಿ ಅಂದಿನ ಗ್ರಾಮ ಪಂಚಾಯತಿ ಕಾರ್ಯದರ್ಶಿ ಅಣಬಗೆರೆ ಹಾಗೂ ಶ್ರೀ.ಮಂಜುನಾಥ ರಾವ್ ಅಂದಿನ ಕಿರಿಯ ಇಂಜಿನಿಯರ್, ಇವರ ವಿರುದ್ದ ಜಂಟಿ ಇಲಾಖಾ ವಿಚಾರಣೆ ಹೂಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಆಪಾದಿತರಿಗೆ ಆರೋಪಪಟ್ಟಿಯನ್ನು ಜಾರಿ ಮಾಡಿತ್ತು. ಆಪಾದಿತರಾದ ಶ್ರೀ.ಸೋಮಾಚಾರಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿದ್ದರು. ಮತ್ತೊಬ್ಬ ಆಪಾದಿತರಾದ ಶ್ರೀ.ಮಂಜುನಾಥರಾವ್ ಕಿರಿಯ ಇಂಜಿನಿಯರ್ ಇವರು ಸರ್ಕಾರದಿಂದ ಜಾರಿಗೊಳಿಸಲಾಗಿದ್ದ ಕಾರಣ ಕೇಳುವ ನೋಟಿಸ್‌ಗೆ ನಿಗಧಿತ ಅವಧಿಯೊಳಗೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿರುವುದಿಲ್ಲ. ಒಬ್ಬ ಆಪಾದಿತರು ತಮ್ಮ ಮೇಲಿನ ಆರೋಪ ಗಳನ್ನು ನಿರಾಕರಿಸಿದ್ದರಿಂದ:ಮತ್ತೊಬ್ಬ ಆಪಾದಿತರು ನಿಗದಿತ ಅವಧಿಯೊಳಗಾಗಿ ಲಿಖಿತ ಹೇಳಿಕೆಯನ್ನು ಸಲ್ಲಿಸದ ಕಾರಣ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ:(4)ರ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ.ಎಂ.ವಿ.ಶೀಲವಂತ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತಿ ಬಳ್ಳಾರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ತದನಂತರ, ದಿ:15-6-2002ರ ಆದೇಶದಲ್ಲಿ ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದ್ದ ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್ ಬಳ್ಳಾರಿ ಇವರ ಬದಲಾಗಿ ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್ ದಾವಣಗೆರೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (5) ರಂತೆ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿದ್ದರು.

ವಿಚಾರಣಾ ವರದಿಯಂತೆ ದುರುಪಯೋಗವಾಗಿರುವ ನಷ್ಟದ ಮೊತ್ತ ರೂ.93,300-00ಗಳ ಪೈಕಿ ಶ್ರೀ.ಸೋಮಾಚಾರಿ ಅಂದಿನ ಕಾರ್ಯದರ್ಶಿ ಅಣಬಗೆರೆ ಇವರು ರೂ.65,800-00ಗಳನ್ನು ದುರುಪಯೋಗಪಡಿಸಿಕೊಂಡಿದ್ದು ಈ ಪೈಕಿ ಅವರು ಈಗಾಗಲೇ ರೂ.64,525-00 ಗಳನ್ನು ಸರ್ಕಾರಕ್ಕೆ ಜಮೆ ಮಾಡಿರುವುದರಿಂದ ಹಾಗೂ ಸದರಿ ಆಪಾದಿತರು ವಿಚಾರಣಾ ಸಮಯದಲ್ಲಿ ಅಂದರೆ ದಿ:26-9-2001ರಂದು ನಿಧನ ಹೊಂದಿರುವುದರಿಂದ ಅವರ ಮೇಲಿನ ವಿಚಾರಣೆಯನ್ನು ವಿಚಾರಣಾಧಿಕಾರಿಯು ತಡೆಹಿಡಿದಿದ್ದಾರೆ. ಹಾಗೂ ಲಭ್ಯ ದಾಖಲೆಗಳನ್ವಯ ಮತ್ತೊಬ್ಬ ಆಪಾದಿತರಾದ ಶ್ರೀ.ಕೆ.ಮಂಜುನಾಥರಾವ್, ಕಿರಿಯ ಇಂಜಿನಿಯರ್ ಇವರ ಮೇಲಿನ ಆರೋಪಗಳು ರುಜುವಾತಾಗಿರುವುದಾಗಿ ವರದಿ ಮಾಡಿದ್ದರು. ಆದರೆ ಶಿಸ್ತು ಪ್ರಾಧಿಕಾರವಾದ ಸರ್ಕಾರವು ಕೆಸಿಎಸ್ (ಸಿಸಿಎ) ನಿಯಮಾವಳಿಗಳ ನಿಯಮ-11 ಎ ರಂತೆ ವಿಚಾರಣಾ ವರದಿಯನ್ನು ಒಪ್ಪದೇ ಅಂದಿನ

ಸಮಾಜ ಕಲ್ಯಾಣ ಅಧಿಕಾರಿಗಳು ಸ್ಥಳ ತನಿಖೆಗೆ ಹೋದಾಗ ದಾಖಲಿಸಿದ ಲಿಖಿತ ಹೇಳಿಕೆ ಪ್ರಕಾರ ಫೆಬ್ರುವರಿ 1997ರ ಮೊದಲ ವಾರದಲ್ಲಿ ಬಿಡುಗಡೆಯಾಗಿದ್ದ 65,800-00ರೂ.ಗಳನ್ನು ಪಂಚಾಯತ್ ಕಾರ್ಯದರ್ಶಿ ಕಿರಿಯ ಅಭಿಯಂತರರಿಗೆ ನೀಡಿರುವುದಿಲ್ಲ. ಈ ಪೈಕಿ ಅವರು ಈಗಾಗಲೇ 64,525-00 ರೂ.ಗಳನ್ನು ಜಮೆ ಮಾಡಿರುವುದರಿಂದ ಉಳಿದ ಮೊತ್ತ ರೂ.1575-00ಗಳಿಗೆ ಶ್ರೀ.ಸೋಮಾಚಾರಿ ಇವರ ಜವಾಬ್ದಾರಿ ಇರುತ್ತದೆ ಮತ್ತು ಆ ಬಾಬ್ತು ಸುಳ್ಳು ದೃಢೀಕರಣ ಪತ್ರ ನೀಡಿದ ಶ್ರೀ.ಮಂಜುನಾಥ ರಾವ್ ಇವರ ಕರ್ತವ್ಯ ಲೋಪವನ್ನು ಪರಿಗಣನೆಗೆ ತೆಗೆದುಕೊಂಡು ಬಾಕಿ ಉಳಿದ ರೂ.27,500-00ಗಳ ಪೈಕಿ ಅರ್ಧದಷ್ಟು ಮೊತ್ತ ಅಂದರೆ 13,500-00 ರೂ.ಗಳಿಗೆ ಶ್ರೀ.ಮಂಜುನಾಥರಾವ್ ಇವರ ಜವಾಬ್ದಾರಿ ಇರುತ್ತದೆ ಎಂದು ನಿರ್ಣಯಿಸಿ ಅದರಂತೆ ಸರ್ಕಾರಕ್ಕೆ ಉಂಟಾಗಿರುವ ನಷ್ಟಕ್ಕೆ ಇಬ್ಬರೂ ಆಪಾದಿತರು ಕಾರಣರೆಂದು ನಿರ್ಣಯಿಸಿ ಆಪಾದಿತರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (7) ರಂತೆ ಎರಡನೇ ಕಾರಣ ಕೇಳುವ ನೋಟಿಸ್‌ನ್ನು ಜಾರಿ ಮಾಡಲಾಗಿತ್ತು. ಸರ್ಕಾರದಿಂದ ಜಾರಿಗೊಳಿಸಲಾದ ಎರಡನೇ ಕಾರಣ ಕೇಳುವ ನೋಟಿಸ್‌ಗೆ ಆಪಾದಿತರಾದ ಶ್ರೀ.ಮಂಜುನಾಥರಾವ್ ಇವರು ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದರೆ, ಮತ್ತೊಬ್ಬ ಆಪಾದಿತರಾದ ದಿವಂಗತ ಸೋಮಾಚಾರಿ ಇವರ ಪತ್ನಿಯಾದ ಶ್ರೀಮತಿ ವಿಶಾಲಕ್ಷಮ್ಮ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ:(8) ರಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿ ತಮ್ಮ ಆರೋಗ್ಯ ಪರಿಸ್ಥಿತಿ ಹದಗೆಟ್ಟಿರುವುದರಿಂದ ಹಾಗೂ ತಾವು ಹಣದ ಮುಗ್ಗಟ್ಟಿನಲ್ಲಿರುವುದರಿಂದ ಇಂತಹ ಪರಿಸ್ಥಿತಿಯಲ್ಲಿ ತಮ್ಮ ಪತಿಯು ದುರುಪಯೋಗಪಡಿಸಿಕೊಂಡಿರುವ ನಷ್ಟದ ಮೊತ್ತವನ್ನು ಭರಿಸಲು ತಾವು ಅಶಕ್ತರಾಗಿರುವುದಾಗಿ ತಿಳಿಸಿರುತ್ತಾರೆ.

ಮೃತಆಪಾದಿತರ ವಾರಸುದಾರರು ಜಾರಿಗೊಳಿಸಲಾಗಿದ್ದ ನೋಟಿಸ್‌ಗೆ ಸಲ್ಲಿಸಿರುವ ಲಿಖಿತ ಹೇಳಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಸದರಿ ಲಿಖಿತ ಹೇಳಿಕೆಯನ್ನು ಒಪ್ಪಲು ಮೃತಆಪಾದಿತರ ವಾರಸುದಾರರು ಸಮಂಜಸವಾದ ಕಾರಣ:ದಾಖಲಾತಿಗಳನ್ನು ಒದಗಿಸಿಲ್ಲದಿರುವುದರಿಂದ ಮೃತರ ಮೇಲಿನ ಆಪಾದನೆಗಳು ವಿವರವಾದ ವಿಚಾರಣೆ ಸಮಯದಲ್ಲಿ ರುಜುವಾತಾಗಿರುವುದನ್ನು ಸರ್ಕಾರವು ಮನಗಂಡು ರುಜುವಾತಾದ ಆಪಾದನೆಗಳ ಪರಿಮಾಣಕ್ಕನುಗುಣವಾಗಿ ವಿಚಾರಣಾ ವರದಿಯಂತೆ ಪ್ರಕರಣದಲ್ಲಿ ದುರುಪಯೋಗವಾಗಿರುವ ನಷ್ಟದ ಮೊತ್ತ ರೂ.93,300-00 ಗಳ ಪೈಕಿ ಶ್ರೀ.ಕೆ.ಸೋಮಾಚಾರಿ ಅಂದಿನ ಗ್ರಾಮ ಪಂಚಾಯತಿ ಕಾರ್ಯದರ್ಶಿ ಅಣಬಗೆರೆ ಇವರು 65,800-00 ರೂ. ಗಳನ್ನು ದುರುಪಯೋಗಪಡಿಸಿಕೊಂಡಿದ್ದು ಅವರು ಈ ಪೈಕಿ ಈಗಾಗಲೇ ರೂ.64,525-00ಗಳನ್ನು ಜಮೆ ಮಾಡಿರುವುದರಿಂದ ಅವರಿಂದ ದುರುಪಯೋಗವಾಗಿರುವ ರೂ.1,525-00ಗಳನ್ನು ಹಾಗೂ ದುರುಪಯೋಗವಾಗಿರುವ ಉಳಿದ ರೂ.27,500-00ಗಳ ಪೈಕಿ ಅರ್ಧದಷ್ಟು ಮೊತ್ತ 13750-00 ರೂ.ಗಳು ಹೀಗೆ ಒಟ್ಟಿಗೆ ರೂ.15,275-00 ಗಳನ್ನು ಶೇಕಡ 12 ಬಡ್ಡಿಯೊಂದಿಗೆ ಅವರ ವಾರಸುದಾರರಿಂದ ಹಾಗೂ ಮತ್ತೊಬ್ಬ ಆಪಾದಿತರಾದ ಶ್ರೀ.ಮಂಜುನಾಥರಾವ್, ಕಿರಿಯ ಇಂಜಿನಿಯರ್ ಇವರಿಂದ 13,750-00ಗಳನ್ನು ಶೇಕಡ 12 ರಷ್ಟು ಬಡ್ಡಿಯೊಂದಿಗೆ ವಸೂಲು ಮಾಡುವ ದಂಡನೆ ವಿಧಿಸಲು ನಿರ್ಧರಿಸಿ ಆ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಆಯೋಗವು ಮೇಲೆ ಓದಲಾದ ಕ್ರಮ ಸಂಖ್ಯೆ: (9)ರ ಪತ್ರದಲ್ಲಿ ಪ್ರಕರಣದಲ್ಲಿನ ಆಪಾದಿತರಿಗೆ ಸರ್ಕಾರವು ಪ್ರಸ್ತಾಪಿಸಿರುವಂತೆ ದಂಡನೆಯನ್ನು ವಿಧಿಸಲು ಸಹಮತಿ ನೀಡಿರುತ್ತದೆ. ಆದ್ದರಿಂದ, ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 92 ಇಎನ್‌ಕ್ಯೂ 97, ಬೆಂಗಳೂರು ದಿನಾಂಕ: 30ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಹರಪನಹಳ್ಳಿ ತಾಲ್ಲೂಕಿನ ಅಣಬಗೆರೆ ಗ್ರಾಮ ಪಂಚಾಯತಿಯಲ್ಲಿ ನಿರ್ಮಲ ಕರ್ನಾಟಕ ಯೋಜನೆ ಅಡಿ ಶೌಚಾಲಯಗಳ ನಿರ್ಮಾಣದಲ್ಲಿ ನಡೆದಿರುವ ಅಕ್ರಮಗಳಿಗೆ ಕಾರಣರಾದ ಶ್ರೀ.ಕೆ.ಸೋಮಾಚಾರಿ ಅಂದಿನ ಗ್ರಾಮ ಪಂಚಾಯತಿ ಕಾರ್ಯದರ್ಶಿ, ಅಣಬಗೆರೆ ಇವರ ವಾರಸುದಾರರಿಂದ ಇವರಿಗೆ ಸಲ್ಲಬೇಕಾದ ನಿವೃತ್ತಿ ವೇತನ ಸೌಲಭ್ಯಗಳಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ-214ರನ್ವಯ ರೂ.15,275-00ಗಳನ್ನು (ಹದಿನೈದು ಸಾವಿರದ ಇನ್ನೂರ ಎಪ್ಪತ್ತೈದು ರೂಪಾಯಿಗಳು ಮಾತ್ರ) ಫೆಬ್ರವರಿ 1997ರಿಂದ ಹಣ ವಸೂಲಾಗುವವರೆಗೆ ಶೇಕಡ 12ರಷ್ಟು ಬಡ್ಡಿಯೊಂದಿಗೆ ವಸೂಲು ಮಾಡಲು ಹಾಗೂ ಮತ್ತೊಬ್ಬ ಆಪಾದಿತರಾದ ಶ್ರೀ.ಮಂಜುನಾಥರಾವ್ ಅಂದಿನ ಕಿರಿಯ ಇಂಜಿನಿಯರ್ ಇವರಿಂದ ಕ.ಸ.ಸೇ (ವನಿಅ) ನಿಯಮಾವಳಿಗಳ ನಿಯಮ 8 (iv) ರನ್ವಯ ರೂ.13,750-00 ಗಳನ್ನು (ಹದಿಮೂರು ಸಾವಿರದ ಏಳನೂರ ಐವತ್ತು ರೂಪಾಯಿಗಳು ಮಾತ್ರ) ಫೆಬ್ರವರಿ 1997ರಿಂದ ಈ ಹಣ ವಸೂಲಾಗುವವರೆಗೆ ಶೇಕಡ 12ರಷ್ಟು ಬಡ್ಡಿಯೊಂದಿಗೆ ವಸೂಲು ಮಾಡಲು ಹಾಗೂ ಸದರಿ ನಿಯಮಾವಳಿಗಳ ನಿಯಮ-8 (iii) ರನ್ವಯ ಸದರಿಯವರು ಎಸಗಿರುವ ಕರ್ತವ್ಯಲೋಪಕ್ಕಾಗಿ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಹೊನ್ನಪ್ಪ ನಾಯಕ್**

ಪಿ.ಆರ್. 1375 ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ) ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಕಲಂ 27(1)ನ್ನು ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ ನಿ. ಪಾಂಡವಪುರ, ಮಂಡ್ಯ ಜಿಲ್ಲೆ ಇದಕ್ಕೆ ಸಂಬಂಧಿಸಿದಂತೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ:** ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು, ಇವರ ಪತ್ರ ಸಂಖ್ಯೆ: ಡಿಎಸ್‌ಕೆ.ಇಎಸ್‌ಟಿಎಸ್:51:2004-05, ದಿನಾಂಕ: 28.08.2004.

**ಪ್ರಸ್ತಾವನೆ:**

ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ ನಿ., ಪಾಂಡವಪುರ, ಮಂಡ್ಯ ಜಿಲ್ಲೆ ಇದರ 2001-02 ಮತ್ತು 2002-2003ನೇ ಸಾಲಿನ ಮಹಾಸಭೆಗಳನ್ನು ನಡೆಸುವ ಅವಧಿಯನ್ನು ದಿನಾಂಕ: 31.03.2005 ರವರೆಗೆ ವಿಸ್ತರಿಸಲು ಅನುಕೂಲವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಪ್ರಕರಣ 121 ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 27(1)ಕ್ಕೆ ಸೂಕ್ತ ತಿದ್ದುಪಡಿ ಮಾಡಬೇಕೆಂದು ಮೇಲೆ ಓದಲಾದ ಪತ್ರದಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಕಬ್ಬು ಅಭಿವೃದ್ಧಿ ಆಯುಕ್ತರ ಮತ್ತು ಸಕ್ಕರೆ ನಿರ್ದೇಶಕರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಮಾತೂ 154 ಸಸಕಾ 2004, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 27(1)ರ ಪ್ರಕರಣವನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ ನಿ., ಪಾಂಡವಪುರ, ಮಂಡ್ಯ ಜಿಲ್ಲೆ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ.-

**27ರ ಪ್ರಕರಣದಲ್ಲಿ:**

(1)ನೇ ಉಪ ಪ್ರಕರಣದಲ್ಲಿರುವ "ಆರು ತಿಂಗಳು" ಎಂಬ ಪದಕ್ಕೆ ಬದಲಾಗಿ "ಮೂವತ್ತು ತಿಂಗಳು" ಎಂಬುದಾಗಿ ಸೇರಿಸತಕ್ಕದ್ದು.

**ಸೂಚನೆ:** 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 31.03.2005ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ, ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1) ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಗಣೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 1376

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಮಲ್ಲಿಕಾರ್ಜುನ ಸ್ವಾಮಿ ಎಜುಕೇಷನ್ ಸೊಸೈಟಿ, ಉದಯಗಿರಿ, ಮೈಸೂರು ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 9 ಮುನೋಸೊ 2003, ದಿನಾಂಕ: 16.6.2003.
2. ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ: 28680/03 ರಲ್ಲಿನ ಆದೇಶದ ದಿನಾಂಕ:4.8.2003.
3. ವಿಚಾರಣಾ ಪ್ರಾಧಿಕಾರದ ತೀರ್ಮಾನದ ಆದೇಶ ಸಂಖ್ಯೆ: ಕಂಇ 52 ಮುನೋಸೊ 2003, ದಿನಾಂಕ:5.10.04.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿ ಎಜುಕೇಷನ್ ಸೊಸೈಟಿ, ಉದಯಗಿರಿ, ಮೈಸೂರು, ಈ ಸಂಸ್ಥೆಯು 1975 ರಲ್ಲಿ ನೋಂದಾಯಿಸಲ್ಪಟ್ಟಿದ್ದು, 1994 ರ ನಂತರದ ಅವಧಿಗೆ ಸದರಿ ಸಂಸ್ಥೆಯ ಲೆಕ್ಕಪತ್ರಗಳನ್ನು ಸಲ್ಲಿಸಿರುವುದಿಲ್ಲ. ಸದರಿ ಸಂಘದ ಆಡಳಿತ ಮಂಡಳಿಯಲ್ಲಿ 2 ಗುಂಪುಗಳಾಗಿ ಆಂತರಿಕ ಕಲಹ ಉಂಟಾಗಿ ಸಂಘಗಳ ನೋಂದಣಾಧಿಕಾರಿಗಳು, ಮೈಸೂರು ಇವರು ತಮ್ಮ ದಿನಾಂಕ:17.4.2004 ರ ಪತ್ರ ಸಂಖ್ಯೆ: ಸೊಸೈಟಿ/45/75-76 ರಲ್ಲಿ ಸದರಿ ಸಂಘವು ಲೆಕ್ಕಪತ್ರಗಳನ್ನು ಸಲ್ಲಿಸದೇ 1960 ರ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯನ್ನು ಉಲ್ಲಂಘನೆ ಮಾಡಿರುವುದಲ್ಲದೆ, ಸದರಿ ಸಂಘದಲ್ಲಿನ ಅವ್ಯವಹಾರದ ಬಗ್ಗೆ ದೂರುಗಳು ಬಂದಿರುವುದರಿಂದ, ಸದರಿ ಕಾಯಿದೆಯ ಕಲಂ 27-ಎ ಪ್ರಕಾರ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರ ಆಧಾರದ ಮೇಲೆ, ಸಂಸ್ಥೆಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರಿಗೆ ಕಾರಣ ಕೇಳುವ ಸೂಚನಾ ಪತ್ರ ಜಾರಿ ಮಾಡಿ ಲಿಖಿತ ಹೇಳಿಕೆ ಪಡೆದು ದಿನಾಂಕ:16.6.2003 ರಂದು ಆಡಳಿತಾಧಿಕಾರಿ ನೇಮಕ ಮಾಡಿ ಆದೇಶಿಸಲಾಗಿದೆ. ಸದರಿ ಆದೇಶದ ವಿರುದ್ಧ ಸಂಸ್ಥೆಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಸಲ್ಲಿಸಿದ ರಿಟ್ ಪಿಟಿಷನ್ ಸಂಖ್ಯೆ: 28680/2003 ರಲ್ಲಿ ದಿನಾಂಕ: 4.8.2003 ರಂದು ನೀಡಿದ ಮೇಲೆ ಓದಲಾದ 2 ರ ತೀರ್ಪಿನಲ್ಲಿ ಸರ್ಕಾರವು 1960 ರ ಕರ್ನಾಟಕ ಸಂಘಗಳ ನೋಂದಣಿ ಕಾಯಿದೆ ಕಲಂ 27-ಎ ರಂತೆ ಆಡಳಿತಾಧಿಕಾರಿಯನ್ನು ನೇಮಿಸುವುದಕ್ಕೆ ಮುನ್ನ ವಿಚಾರಣೆ ನಡೆಸಿ ಆದೇಶ ಮಾಡಲಿಲ್ಲ ಎಂಬ ಕಾರಣಕ್ಕಾಗಿ ಸದರಿ ಆದೇಶವನ್ನು ರದ್ದುಪಡಿಸಿ 30 ದಿನಗಳೊಳಗಾಗಿ ಪುನ: ವಿಚಾರಣೆ ನಡೆಸಿ ಸೂಕ್ತ ಆದೇಶ ನೀಡಲು ನಿರ್ದೇಶನ ನೀಡಿದ್ದರ ಪ್ರಕಾರ ವಿಚಾರಣಾ ಪ್ರಾಧಿಕಾರವಾದ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ರವರು ದಿನಾಂಕ:6.3.2004, 27.3.2004, 19.5.2004, 18.6.2004, 16.7.2004, 6.8.2004, 11.8.2004 ಮತ್ತು 13.8.2004 ರಂದು ನಡೆಸಿದ ವಿಚಾರಣೆಯಲ್ಲಿ ಪ್ರತಿವಾದಿ ಸಂಘದ ಪರವಾಗಿ ವಕೀಲರಾದ ಶ್ರೀ ಟಿ.ಎನ್.ರಘುಪತಿ ಮತ್ತು ಚಂದ್ರಶೇಖರ್ ರವರು ಹಾಗೂ ವಾದಿಗಳಾದ ಶ್ರೀ ಮಲ್ಲಿಕಾರ್ಜುನಯ್ಯ ಮತ್ತಿತರ 8 ಮಂದಿಯ ಪರವಾಗಿ ನ್ಯಾಯವಾದಿ ಶ್ರಿ ವೆಂಕಟಾಚಲಯ್ಯರವರು ಹಾಜರಾಗಿರುತ್ತಾರೆ.

ವಿಚಾರಣೆಯಲ್ಲಿ ವಾದಿ ಮತ್ತು ಪ್ರತಿವಾದಿಗಳ ಹೇಳಿಕೆ ಹಾಗೂ ಒದಗಿಸಿರುವ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಸಂಘದಲ್ಲಿ ಪ್ರಸಕ್ತ ಇರುವ ಆಡಳಿತ ಮಂಡಳಿಯು ಕಾನೂನಿನಂತೆ ಚುನಾಯಿತವಾದ ಮಂಡಳಿ ಅಲ್ಲ ಮತ್ತು ಈ ಸಮಿತಿಯು ನಿಜವಾದ ಸದಸ್ಯರುಗಳ ಸಭೆ ಕರೆದು ಚುನಾವಣೆ ನಡೆಸುವ ಭರವಸೆ ಇಲ್ಲವಾದ್ದರಿಂದ, ಕರ್ನಾಟಕ ಸಂಘಗಳ ನೋಂದಣಿ ಕಾಯಿದೆಯ ವಿಧಿ 27-ಎ ಪ್ರಕಾರ ಸದರಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಲು ಮತ್ತು ಸದರಿ ಆಡಳಿತಾಧಿಕಾರಿಯು ನಿಯಮಾನುಸಾರ ಸಂಘದ ಕಾರ್ಯಕಾರಿ ಸಮಿತಿಗೆ 3 ತಿಂಗಳೊಳಗಾಗಿ ಚುನಾವಣೆ ನಡೆಸಿ, ಆಯ್ಕೆಯಾದ ಸಮಿತಿಗೆ ಸಂಘದ ಅಧಿಕಾರವನ್ನು ಹಸ್ತಾಂತರಗೊಳಿಸಲು ವಿಚಾರಣಾ ಪ್ರಾಧಿಕಾರವು ಮೇಲೆ ಓದಲಾದ (3) ರಲ್ಲಿ ಆದೇಶಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 52 ಮುನೋಸೊ 03, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಉಚ್ಛ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 28680/2003 ರಲ್ಲಿ ದಿನಾಂಕ:4.8.2003 ರಂದು ನೀಡಿದ ಆದೇಶದಂತೆ ಶ್ರೀ ಮಲ್ಲಿಕಾರ್ಜುನ ಸ್ವಾಮಿ ಎಜುಕೇಶನ್ ಸೊಸೈಟಿ, ಉದಯಗಿರಿ, ಮೈಸೂರು ಜಿಲ್ಲೆ ಈ ಸಂಸ್ಥೆ ಕುರಿತು ವಿಚಾರಣೆ ನಡೆಸಿದ ಪ್ರಾಧಿಕಾರವು ಸದರಿ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಆದೇಶಿಸಿದ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960 ರ ಕಲಂ 27-ಎ (1)(ಸಿ) ಪ್ರಕಾರ ಉಪ ವಿಭಾಗಾಧಿಕಾರಿಗಳು, ಮೈಸೂರು ಉಪ ವಿಭಾಗ, ಮೈಸೂರು ಜಿಲ್ಲೆ ಇವರನ್ನು 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನಾಗಿ ನೇಮಕಾತಿ ಮಾಡಿ ಆದೇಶಿಸಿದೆ.

ಆಡಳಿತಾಧಿಕಾರಿಗಳು 3 ತಿಂಗಳೊಳಗೆ ಕಡ್ಡಾಯವಾಗಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1377

**ವಿಷಯ:** ಮೆ:ಜಿ.ಇ.ಇಂಡಿಯಾ ಟೆಕ್ನಾಲಜಿ ಸೆಂಟರ್ ಸಂಸ್ಥೆಗೆ ಬೆಂಗಳೂರಿನ ಇ.ಪಿ.ಐ.ಪಿ. ಕೈಗಾರಿಕಾ ಪ್ರದೇಶದಲ್ಲಿ ಹಂಚಿಕೆ ಮಾಡಿರುವ ಜಮೀನಿಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಐ 102 ಎಸ್‌ಪಿಐ 99 ದಿನಾಂಕ:8.3.2000.
2. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಐ 163 ಎಸ್‌ಪಿಐ 2004, ದಿನಾಂಕ:21.7.2004 ಹಾಗೂ ದಿನಾಂಕ: 6.10.2004.
3. ಮುಖ್ಯ ನಿರ್ವಾಹಕ ಅಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೈಪ್ರಅಮಂ:140961:9504: 2004-05, ದಿನಾಂಕ: 2.11.2004.
3. ದಿನಾಂಕ:10.12.1999 ರಂದು ನಡೆದ 72 ನೇ ಉನ್ನತ ಮಟ್ಟದ ಸಮಿತಿ ಸಭೆ.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರದ ಆದೇಶ ದಿನಾಂಕ:8.3.2000 ರಲ್ಲಿ ಮೆ: ಜಿಇ ಇಂಡಿಯಾ ಟೆಕ್ನಾಲಜಿ ಸೆಂಟರ್ ಸಂಸ್ಥೆಗೆ ಬೆಂಗಳೂರಿನ ಇ.ಪಿ.ಐ.ಪಿ. ಕೈಗಾರಿಕಾ ಪ್ರದೇಶದಲ್ಲಿ ಸ್ಥಾಪಿಸಲಿರುವ ರಿಸರ್ಚ್ ಮತ್ತು ಡೆವಲೆಪ್‌ಮೆಂಟ್ ಸೆಂಟರ್ ಕುರಿತು ಹಂಚಿಕೆ ಮಾಡಿರುವ ಜಮೀನಿಗೆ ತಗಲುವ ಮುದ್ರಾಂಕ ಮತ್ತು ನೋಂದಣಿ ಶುಲ್ಕದಲ್ಲಿ ಶೇ. 100 ರಷ್ಟು ವಿನಾಯಿತಿ ನೀಡಲು ಆದೇಶಿಸಲಾಗಿದೆ.

ಮೇಲೆ ಓದಲಾದ (2) ರ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ದಿನಾಂಕ:21.7.2004 ಹಾಗೂ 6.10.2004 ರ ಅನಧಿಕೃತ ಟಿಪ್ಪಣಿಯಲ್ಲಿ ಜಿಇ ಇಂಡಿಯಾ ಟೆಕ್ನಾಲಜಿ ಸೆಂಟರ್ ಸಂಸ್ಥೆಯವರು ಬೆಂಗಳೂರಿನಲ್ಲಿ ಸ್ಥಾಪಿಸಲಿರುವ ರಿಸರ್ಚ್ ಮತ್ತು ಡೆವಲೆಪ್‌ಮೆಂಟ್ ಸೆಂಟರ್‌ಗೆ ಹಂಚಿಕೆಯಾಗಿರುವ ಜಮೀನಿಗೆ ತಗಲುವ ಮುದ್ರಾಂಕ ಹಾಗೂ ನೋಂದಣಿ ಶುಲ್ಕದಲ್ಲಿ ಶೇ. 100 ರಷ್ಟು ವಿನಾಯಿತಿ ನೀಡಲು ಶಿಫಾರಸ್ಸು ಮಾಡಲಾಗಿದೆ.

ಮೇಲೆ ಓದಲಾದ (3) ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರ ಪತ್ರದಲ್ಲಿ ಮೆ: ಜಿಇ ಇಂಡಿಯಾ ಟೆಕ್ನಾಲಜಿ ಸೆಂಟರ್ ಸಂಸ್ಥೆ ಇವರಿಗೆ ಬೆಂಗಳೂರಿನ ಇ.ಪಿ.ಐ.ಪಿ. ಕೈಗಾರಿಕಾ ಪ್ರದೇಶದಲ್ಲಿ ರೂ.15,10,56,793 ಗಳ ಮೌಲ್ಯದ ಒಟ್ಟು 49.46 ಎಕರೆ ಜಮೀನನ್ನು ಹಂಚಿಕೆ ಮಾಡಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ (4) ರ ದಿನಾಂಕ: 10.12.1999 ರ ಉನ್ನತ ಮಟ್ಟದ ಸಮಿತಿ ಸಭೆಯಲ್ಲಿ ಸದರಿ ಪ್ರಸ್ತಾವನೆಯು ಅನುಮೋದಿಸಲ್ಪಟ್ಟಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 524 ಮುನೋಮು 2004, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆ:ಜಿಇ ಇಂಡಿಯಾ ಟೆಕ್ನಾಲಜಿ ಸೆಂಟರ್ ಸಂಸ್ಥೆ, ಬೆಂಗಳೂರು ಇವರು ಬೆಂಗಳೂರಿನ ಇ.ಪಿ.ಐ.ಪಿ. ಕೈಗಾರಿಕಾ ಪ್ರದೇಶದಲ್ಲಿ ಸ್ಥಾಪಿಸಲಿರುವ ರಿಸರ್ಚ್ ಮತ್ತು ಡೆವಲೆಪ್‌ಮೆಂಟ್ ಸೆಂಟರ್ ಕುರಿತು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರಿಂದ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿ ಹಂಚಿಕೆ ಮಾಡಿರುವ ರೂ.15,10,56,793 ಗಳ ಮೌಲ್ಯದ ಒಟ್ಟು 49.46 ಎಕರೆ ಜಮೀನಿನ ನೋಂದಣಿಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ ಶೇ. 100 ರಷ್ಟು ವಿನಾಯಿತಿಯನ್ನು ಕರ್ನಾಟಕ ಮುದ್ರಾಂಕ ಕಾಯಿದೆ 1957 ರ ಕಲಂ 9 (1) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನೀಡಲಾಗಿದೆ.

| ಕ್ರ.ಸಂ. | ಗ್ರಾಮದ ಹೆಸರು | ಸರ್ವೆ ನಂ. | ವಿಸ್ತೀರ್ಣ (ಎಕರೆಗಳಲ್ಲಿ) | ಒಟ್ಟು |
|---|---|---|---|---|
| 1 | ಹೂಡಿ | 152(P) | 2.10 | |
| | | 199(P) | 2.20 | |
| | | 200(P) | 1.72 | |
| | | 201(P) | 0.27 | |
| | | 204(P) | 0.17 | |
| | | 205(P) | 0.10 | |
| | | 206(P) | 0.11 | |
| | | | | 6.67 |
| 2 | ಕುಂದಲಹಳ್ಳಿ | 29(P) | 2.85 | |
| | | 30(P) | 1.23 | |
| | | 31(P) | 0.77 | |
| | | 32(P) | 2.06 | |
| | | 33(P) | 6.13 | |
| | | 34(P) | 6.07 | |
| | | 35 | 4.80 | |
| | | | | 23.91 |
| 3 | ನಲ್ಲೂರಹಳ್ಳಿ | 79(P) | 2.12 | |
| | | 80(P) | 15.41 | |
| | | 81(P) | 1.35 | |
| | | | | 18.88 |
| | ಒಟ್ಟು | | | **49.46 (200165.00 ಚದರ ಮೀಟರ್)** |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪ್ರ.ಕಾ.ಆ.ಇ:5509/04 ಮತ್ತು 5513/04, ದಿನಾಂಕ: 29.11.2004 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎನ್.ಶ್ರೀಮುಖಿ**

ಪಿ.ಆರ್. 1378 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** 2004-05 ನೇ ಸಾಲಿನಲ್ಲಿ ರಾಜ್ಯದಲ್ಲಿನ ಕೆಲವೊಂದು ತಾಲ್ಲೂಕುಗಳಲ್ಲಿ ಮುಂಗಾರು ಮಳೆಯು ವಿಫಲವಾಗಿರುವುದರಿಂದ ತಾಲ್ಲೂಕುಗಳನ್ನು **ಬರಪೀಡಿತ ಪ್ರದೇಶ** ಎಂಬುದಾಗಿ ಘೋಷಿಸುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದಲ್ಲಿ ಸತತ ಮೂರು ವರ್ಷಗಳಿಂದ ಬರಪರಿಸ್ಥಿತಿ ಇದೆ. 2001-2002ನೇ ಸಾಲಿನಲ್ಲಿ ಬರ ಪರಿಸ್ಥಿತಿ ಇದ್ದ ಪ್ರಯುಕ್ತ ರಾಜ್ಯದ 154 ತಾಲ್ಲೂಕುಗಳನ್ನು, 2002-2003ನೇ ಸಾಲಿನಲ್ಲಿ 159 ತಾಲ್ಲೂಕುಗಳನ್ನು, 2003-2004ರಲ್ಲಿ 162 ತಾಲ್ಲೂಕುಗಳನ್ನು ಮತ್ತು 2004-05ನೇ ಸಾಲಿನಲ್ಲಿ 48 ತಾಲ್ಲೂಕುಗಳನ್ನು **ಬರಪೀಡಿತ ಪ್ರದೇಶ** ಎಂದು ಘೋಷಿಸಲಾಗಿದೆ.

ರಾಜ್ಯದಲ್ಲಿ ಪ್ರಸ್ತುತ ಸಾಲಿನಲ್ಲಿ ಹಿಂಗಾರು ಮಳೆಯು ಕುಂಠಿತವಾಗಿದ್ದು, ಕೆಲವು ಜಿಲ್ಲೆಯ ತಾಲ್ಲೂಕುಗಳಲ್ಲಿ ಮಳೆಯ ಕೊರತೆ ಇದ್ದು, ಈ ಪ್ರದೇಶದಲ್ಲಿ ಹಿಂಗಾರು ಹಂಗಾಮಿನ ಬಿತ್ತನೆ ಪ್ರದೇಶದಲ್ಲಿ ಹೆಚ್ಚು ಪ್ರದೇಶವು ಒಣಹವೆಯಿಂದ ಮಳೆಯ ಕೊರತೆಯಿಂದ ಕುಂಠಿತವಾಗಿದೆ. ಇದರಿಂದಾಗಿ ಬಿತ್ತಿದ ಬೆಳೆಯು ಪೀಡಿತವಾಗಿದೆ.

ದಿನಾಂಕ 4.12.2004 ರಂದು ಬರಪರಿಹಾರ ಕುರಿತಾದ ಸಚಿವ ಸಂಪುಟದ ಉಪಸಮಿತಿಯ ಸಭೆಯಲ್ಲಿ ರಾಜ್ಯದಲ್ಲಿನ ಮಳೆ ಕೊರತೆ ಬಗ್ಗೆ ಪರಿಶೀಲಿಸಿದೆ. ರಾಜ್ಯದಲ್ಲಿನ ಕೆಲವು ತಾಲ್ಲೂಕುಗಳಲ್ಲಿ ಮಳೆಯ ಕೊರತೆ ಮತ್ತು ಕೃಷಿ ಚಟುವಟಿಕೆಗಳ ಬಗ್ಗೆ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬರ ಪರಿಹಾರ ಉಸ್ತುವಾರಿ ಕೋಶ, ಕೃಷಿ ಇಲಾಖೆಯು ಮಾಹಿತಿಯನ್ನು ಒದಗಿಸಿವೆ.

ದಿನಾಂಕ 30.11.2004 ರಂದು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯಮಟ್ಟದ ಹವಾಮಾನ ಕಾವಲು ಸಮಿತಿ ಸಭೆಯಲ್ಲಿ ರಾಜ್ಯದಲ್ಲಿನ ಕೆಲವು ತಾಲ್ಲೂಕುಗಳಲ್ಲಿ ಮಳೆಯ ಕೊರತೆ, ಕೃಷಿ ಚಟುವಟಿಕೆಗಳು ಕುಂಠಿತವಾಗಿರುವ ಬಗ್ಗೆ ಸಮೀಕ್ಷಿಸಲಾಗಿದೆ. ಹಾಲಿ 32 ತಾಲ್ಲೂಕುಗಳಲ್ಲಿ ಮಳೆಯ ಕೊರತೆ, ಬಿತ್ತನೆಯಾಗಿರುವ ಪ್ರದೇಶದ ಹೆಚ್ಚು ಭಾಗ ಬರಪೀಡಿತವಾಗಿದ್ದು, ಅಂತರ ಜಲಮಟ್ಟವು ಕುಸಿದಿದ್ದು ಸತತ 3 ವರ್ಷಗಳ ಬರಗಾಲದಿಂದ ಪೀಡಿತವಾಗಿರುವ ಈ ಪ್ರದೇಶಗಳು ಪುನ: 4ನೆಯ ವರ್ಷ ಬರಗಾಲದ ಪರಿಸ್ಥಿತಿಗೆ ಒಳಗಾಗಿದ್ದು ಇದರಿಂದಾಗಿ ಕೃಷಿ ಕಾರ್ಮಿಕರು ಅದರಲ್ಲೂ ಸಣ್ಣ ಹಾಗೂ ಅತಿಸಣ್ಣ ರೈತರಿಗೆ ಬೆಳೆಯನ್ನು ಬೆಳೆಸಲು ಸಾಧ್ಯವಾಗದೆ ಯಾವುದೇ ಉದ್ಯೋಗವಿಲ್ಲದೆ ಆರ್ಥಿಕವಾಗಿ ತೊಂದರೆಗೆ ಒಳಗಾಗಿದ್ದಾರೆ. ಕೃಷಿ ಕಾರ್ಮಿಕರಿಗೆ ಉದ್ಯೋಗ ಒದಗಿಸುವ ದೃಷ್ಟಿಯಿಂದ ಬರಪರಿಹಾರ ಕಾರ್ಯಗಳನ್ನು ಹಮ್ಮಿಕೊಳ್ಳುವ ಸಲುವಾಗಿ ಪ್ರಸ್ತುತ 2004–05ನೇ ಸಾಲಿನಲ್ಲಿ ಮಳೆ ಕೊರತೆ ಕೃಷಿ ಚಟುವಟಿಕೆಗಳು ಕುಂಠಿತವಾಗಿವೆ. ಈ ಪರಿಸ್ಥಿತಿಯಲ್ಲಿ ಈಗಾಗಲೇ ಘೋಷಣೆ ಮಾಡಿರುವ 48 ತಾಲ್ಲೂಕುಗಳ ಜತೆಗೆ, ಈ 32 ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶ ಎಂಬುದಾಗಿ ಘೋಷಿಸುವ ಬಗ್ಗೆ ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 65 ಟಿಎಸ್‌ವೈ 2004, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಅನುಬಂಧ–1 ರಲ್ಲಿ ನಮೂದಿಸಿರುವ ರಾಜ್ಯದಲ್ಲಿನ 32 ತಾಲ್ಲೂಕುಗಳನ್ನು ತುರ್ತು ಪರಿಹಾರ ಕಾಮಗಾರಿಗಳನ್ನು ಹಮ್ಮಿಕೊಳ್ಳುವ ಉದ್ದೇಶಕ್ಕಾಗಿ 2004–05 ನೇ ಸಾಲಿಗೆ **ಬರಪೀಡಿತ ಪ್ರದೇಶ**ಗಳೆಂದು ತಕ್ಷಣದಿಂದ ಜಾರಿಗೆ ಬರುವಂತೆ ಘೋಷಿಸಲಾಗಿದೆ.

ಎಲ್ಲಾ ಇಲಾಖೆಗಳು ಬರಪೀಡಿತ ಪ್ರದೇಶವೆಂದು ಘೋಷಿಸಿರುವ ಈ ತಾಲ್ಲೂಕುಗಳಲ್ಲಿ ಗರಿಷ್ಠ ಮಟ್ಟದಲ್ಲಿ ಉದ್ಯೋಗಸೃಜನೆ ಕಾಮಗಾರಿಗಳು, ಕುಡಿಯುವ ನೀರಿನ ವ್ಯವಸ್ಥೆ, ಜಾನುವಾರುಗಳ ಸಂರಕ್ಷಣೆ ಇತ್ಯಾದಿ ಕೆಲಸ ಕಾರ್ಯಗಳನ್ನು ಕೈಗೆತ್ತಿಕೊಂಡು ರಾಜ್ಯ ಹಾಗೂ ಕೇಂದ್ರ ಸರ್ಕಾರವು ಹಮ್ಮಿಕೊಳ್ಳುವ ಎಲ್ಲಾ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಸೂಕ್ತಕ್ರಮ ಕೈಗೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಪರಿಹಾರ & ಸೇವೆಗಳು–2).

**ಅನುಬಂಧ - 1**

**ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ ತಾಲ್ಲೂಕುಗಳ ಪಟ್ಟಿ ದಿನಾಂಕ: 6.12.2004**

| ಜಿಲ್ಲೆ | ತಾಲ್ಲೂಕು |
|---|---|
| 1. ಬಾಗಲಕೋಟೆ | 1. ಹುನಗುಂದ<br>2. ಬಾದಾಮಿ<br>3. ಜಮಖಂಡಿ(ನೀರಾವರಿ ಇಲ್ಲದ ಪ್ರದೇಶ)<br>4. ಬೀಳಗಿ |
| 2. ಬೆಳಗಾಂ | 5. ರಾಮದುರ್ಗ<br>6. ಬೆಳಗಾಂ<br>7. ಗೋಕಾಕ್<br>8. ಚಿಕ್ಕೋಡಿ |
| 3. ಬಳ್ಳಾರಿ | 9. ಸಿರಗುಪ್ಪ (ನೀರಾವರಿ ಇಲ್ಲದ ಪ್ರದೇಶ) |
| 4. ಬಿಜಾಪುರ | 10. ಬಾಗೇವಾಡಿ<br>11. ಮುದ್ದೇಬಿಹಾಳ್<br>12. ಇಂಡಿ<br>13. ಸಿಂದಗಿ (ನೀರಾವರಿ ಇಲ್ಲದ ಪ್ರದೇಶ) |

| ಜಿಲ್ಲೆ | ತಾಲ್ಲೂಕು |
|---|---|
| 5. ಹಾಸನ | 14. ಅರಸೀಕೆರೆ |
| 6. ಕೊಪ್ಪಳ | 15. ಯಲಬುರ್ಗಾ |
| 7. ಚಿತ್ರದುರ್ಗ | 16. ಮೊಳಕಾಲ್ಮೂರು<br>17. ಚಿತ್ರದುರ್ಗ |
| 8. ಚಿಕ್ಕಮಗಳೂರು | 18. ತರೀಕೆರೆ |
| 9. ಗದಗ | 19. ಶಿರಹಟ್ಟಿ<br>20. ರೋಣ<br>21. ಗದಗ<br>22. ಮುಂಡರಗಿ |
| 10. ತುಮಕೂರು | 23. ಪಾವಗಡ<br>24. ಶಿರಾ<br>25. ತಿಪಟೂರು |
| 11. ದಾವಣಗೆರೆ | 26. ಜಗಳೂರು<br>27. ದಾವಣಗೆರೆ |
| 12. ಗುಲ್ಬರ್ಗಾ | 28. ಅಫ್ಜಲ್‌ಪುರ<br>29. ಗುಲ್ಬರ್ಗಾ |
| 13. ಬೆಂಗಳೂರು (ಗ್ರಾ) | 30. ದೇವನಹಳ್ಳಿ |
| 14. ಕೋಲಾರ | 31. ಬಾಗೇಪಲ್ಲಿ<br>32. ಚಿಕ್ಕಬಳ್ಳಾಪುರ |

**ಎಂ.ಎಸ್.ದೇಸಾಯಿ**

ಪಿ.ಆರ್. 1379 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಪರಿಹಾರ & ಸೇವೆಗಳು–2).

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಕೆ.ಜಿ.ಹನುಮಂತಪ್ಪ, ಹಿರಿಯ ಉಪನ್ಯಾಸಕರಾಗಿ ಡಯಟ್ ಬೀದರ್‌ಗೆ ವರ್ಗಾವಣೆ ಆದೇಶದಲ್ಲಿರುವವರು – ಇವರ ಮೇಲಿನ ಆಪಾದನೆಗಳ ಬಗ್ಗೆ ಶಿಸ್ತುಕ್ರಮದಲ್ಲಿ ಅಮಾನತ್ತಿನಲ್ಲಿಡುವ ಬಗ್ಗೆ ಆದೇಶ.

**ಓದಲಾಗಿದೆ:** 1. ದಿನಾಂಕ: 16.1.2004, ಸರ್ಕಾರಿ ಅಧಿಸೂಚನೆ ಸಂ:ಇಡಿ 654 ಡಿಪಿಐ 2003.

2. ದಿನಾಂಕ: 12.7.2004 ರ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಪತ್ರ ಸಂಖ್ಯೆ:ಸಿ1(1) ವರ್ಗಾವಣೆ.21:02–03.

ಪ್ರಸ್ತಾವನೆ:

ಶ್ರೀ ಕೆ.ಜಿ.ಹನುಮಂತಪ್ಪ, ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ:(1) ರ ದಿನಾಂಕ:16.1.2004 ರ ಸರ್ಕಾರಿ ಆದೇಶದಲ್ಲಿ ಬೀದರ್, ಡಯಟ್ ಇಲ್ಲಿನ ಹಿರಿಯ ಉಪನ್ಯಾಸಕರ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿತ್ತು. ಆದರೆ ವರ್ಗಾವಣೆ ಆದ ಸ್ಥಳಕ್ಕೆ ಅವರು ಕರ್ತವ್ಯಕ್ಕೆ ಹಾಜರಾಗದೆ ಅಲ್ಲಿಯೇ ಮುಂದುವರೆದರು. ಚುನಾವಣಾ ನೀತಿ ಸಂಹಿತೆ ಅವಧಿ ಅಂತ್ಯಗೊಂಡ ಹಿನ್ನಲೆಯಲ್ಲಿ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಇವರು ಸದರಿಯವರನ್ನು ದಿನಾಂಕ:15.5.2004 ರಲ್ಲಿ ಕರ್ತವ್ಯದಿಂದ ಬಿಡುಗಡೆ ಮಾಡಿರುತ್ತಾರೆ. ತದನಂತರ ವರ್ಗಾವಣೆ ಸಂಬಂಧ ಕೆಎಟಿ ಅರ್ಜಿ ಸಂಖ್ಯೆ:3075/2004 ರ ದಿನಾಂಕ:25.5.2004 ರನ್ವಯ ದಾವೆ ಹೂಡಿದ್ದು, ಸದರಿ ಹುದ್ದೆಯಲ್ಲಿ ಮುಂದುವರೆಯಲು ಕೆಎಟಿ ತೀರ್ಪಿನನ್ವಯ ಆದೇಶವಾದ ದಿನಾಂಕದಿಂದ 4 ವಾರಗಳ ಗಡುವು ನೀಡಿದ್ದರಿಂದ, ಸದರಿ ಗಡುವು ಮುಗಿದ ನಂತರ ಅಂದರೆ ದಿ:23.6.2004 ರಂದು ಉಪನಿರ್ದೇಶಕರು, (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರು ಕರ್ತವ್ಯದಿಂದ ಬಿಡುಗಡೆ ಮಾಡಿರುತ್ತಾರೆ. ಇವರು ವರ್ಗಾವಣೆಯಾಗಿದ್ದು, ಕೆಎಟಿ ಆದೇಶದಲ್ಲಿ ನೀಡಿದ್ದ 4 ವಾರಗಳ ತಡೆಯಾಜ್ಞೆಯ ಅವಧಿ ಮುಗಿದ ನಂತರವೂ ಸಹ ವರ್ಗಾವಣೆಯಾದ ಸ್ಥಳದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಿಲ್ಲವೆಂದು, ಮೇಲೆ ಓದಲಾದ ಕ್ರಮ ಸಂ:2 ರ ದಿನಾಂಕ:12.7.2004 ರ ಪತ್ರದಲ್ಲಿ ಆಯುಕ್ತರು ತಿಳಿಸಿದ್ದು, ಕೆಳಕಂಡ ಕಾರಣಗಳಿಗಾಗಿ ಶ್ರೀ ಹನುಮಂತಪ್ಪ ಅವರನ್ನು ಮಂಗಳೂರಿನಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂದು ಆಯುಕ್ತರು ಅಭಿಪ್ರಾಯ ಪಟ್ಟಿರುತ್ತಾರೆ.

1. ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀಮತಿ ವಿಮಲಾಗೌಡ ರವರು ಈ ಅಧಿಕಾರಿ ಮಹಿಳಾ ಶಿಕ್ಷಕರುಗಳೊಂದಿಗೆ ಅಸಭ್ಯತೆಯಿಂದ ವರ್ತಿಸುವುದರ ಜೊತೆಗೆ ವಿವಿಧ ಆರೋಪಗಳು ಇರುವುದರಿಂದ ಬೇರೆ ಕಡೆಗೆ ವರ್ಗಾಯಿಸುವಂತೆ ಕೋರಿರುತ್ತಾರೆ.
2. ಶ್ರೀ ಕೆ.ಜಿ.ಹನುಮಂತಪ್ಪ, ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಉಮೇಶ್ ಶೆಟ್ಟಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಪ್ರಾಂಶುಪಾಲರು, ಡಯಟ್ ಮಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಸರ್ಕಾರವು ದಿ:3.1.2004 ರಲ್ಲಿ ವಿಚಾರಣಾ ಪ್ರಾಧಿಕಾರ ರಚಿಸಿರುತ್ತಾರೆ.
3. ಸದರಿಯವರ ವಿರುದ್ಧ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ **"ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಲೈಂಗಿಕ ಕಿರುಕುಳ ದೂರು ನಿವಾರಣಾ ಸಮಿತಿ"** ಸಹ ವರದಿ ಸಲ್ಲಿಸಿದ್ದು, ಆಪಾದನೆಗಳಲ್ಲಿ ನಿಜಾಂಶವಿರುವುದಾಗಿ ತಿಳಿಸಿರುತ್ತಾರೆ.
4. ಗುರುಭವನ ನಿರ್ಮಾಣ ಇದರ ಸಮಿತಿ ರಚನೆಯ ಕಾರ್ಯ ಹಾಗೂ ಸಮಿತಿಯ ಕಾರ್ಯವಿಧಾನದಲ್ಲಿ ನಿಯಮಬಾಹಿರ ಕ್ರಮ ಕೈಗೊಂಡಿರುವುದು ಕಂಡು ಬಂದಿರುವುದು.

ಶ್ರೀ ಹನುಮಂತಪ್ಪ ಇವರು ವರ್ಗಾವಣೆಯಾದ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗದಿರುವುದು ಸೇರಿದಂತೆ, ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು, 1966 ರ ನಿಯಮ 3 ನ್ನು ಉಲ್ಲಂಘಿಸಿರುತ್ತಾರೆ.

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಸಲ್ಲಿಸಿರುವ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಇವರ ಮೇಲಿನ ಆರೋಪಗಳ ಬಗ್ಗೆ ಶಿಸ್ತು ಕ್ರಮ ಕಾಯ್ದಿರಿಸಿ, ಸೇವೆಯಿಂದ ಅಮಾನತ್ತಿನಲ್ಲಿಡಲು ನಿರ್ಧರಿಸಿ, ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 114 ಡಿಜಿಡಿ 99 (ಭಾಗ) ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಕೆ.ಜಿ.ಹನುಮಂತಪ್ಪ, (ಬೀದರ್‌ನ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗೆ ಉಪನ್ಯಾಸಕರಾಗಿ ವರ್ಗಾವಣೆ ಆದೇಶದಲ್ಲಿ ಇರುವವರು) ಇವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಶಿಸ್ತು ಕ್ರಮ ಕಾಯ್ದಿರಿಸಿ, ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 10(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಕೆ.ಜಿ.ಹನುಮಂತಪ್ಪ ಅವರನ್ನು ಅಮಾನತ್ತಿನಲ್ಲಿರಿಸಿ ಆದೇಶಿಸಿದೆ.

2. ಶ್ರೀ ಕೆ.ಜಿ.ಹನುಮಂತಪ್ಪ, ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರ ಮೇರೆಗೆ ಜೀವನಾಧಾರ ಭತ್ಯೆ ಪಡೆಯಲು ಅರ್ಹರು ಹಾಗೂ ಅಮಾನತ್ತಿನ ಅವಧಿಯಲ್ಲಿ ಶಿಸ್ತು ಪ್ರಾಧಿಕಾರಿಯಾದ ಸರ್ಕಾರದ ಪೂರ್ವಾನುಮತಿ ಇಲ್ಲದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್.ಸಂಬರಗಿ**

ಪಿ.ಆರ್. 1380 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.(ಸೇ–1,2)

**ವಿಷಯ:** ಅಕ್ಷರ ದಾಸೋಹ-ಮಧ್ಯಾಹ್ನ ಬಿಸಿಯೂಟ ಕಾರ್ಯಕ್ರಮಕ್ಕೆ 80 ಕೋಟಿ ರೂ.ಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 105 ಯೋಯೋಕಾ 2004, ದಿನಾಂಕ: 11.5.2004.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 46 ಎಂಎಂಎಸ್ 2004, ದಿನಾಂಕ: 01.09.2004.
3. ಸರ್ಕಾರಿ ಆದೇಶ ಸಂಖ್ಯೆ: ಇಡಿ 46 ಎಂಎಂಎಸ್ 2004, ದಿನಾಂಕ: 1.10.2004.
4. ಸಹ ನಿರ್ದೇಶಕರು (ಮಧ್ಯಾಹ್ನ ಉಪಹಾರ ಯೋಜನೆ), ಸಾರ್ವಜನಿಕ ಶಿಕ್ಷಣ ಇಲಾಖೆ ಅವರ ಪತ್ರ ಕ್ರಮಾಂಕ: ಎಂ6: ಅ.ದಾ: ಅನುದಾನ ಬಿಡುಗಡೆ:18:2004-05, ದಿನಾಂಕ: 12.10.2004.

**ಪ್ರಸ್ತಾವನೆ:**

ರಾಜ್ಯಾದ್ಯಂತ ಜಾರಿಯಲ್ಲಿರುವ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮ ಅಕ್ಷರ ದಾಸೋಹ ಕಾರ್ಯಕ್ರಮದ ಮುಂದುವರಿಕೆಗಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 11.5.2004ರ ಸರ್ಕಾರಿ ಆದೇಶದಲ್ಲಿ 13,500 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಯಿತು. ತದನಂತರ ಮೇಲೆ (2) ಮತ್ತು (3) ರಲ್ಲಿ ಓದಲಾದ ದಿನಾಂಕ: 01.9.2004 ಹಾಗೂ 01.10.2004ರ ಸರ್ಕಾರಿ ಆದೇಶಗಳಲ್ಲಿ ಅದುವರೆಗೆ ಸರ್ಕಾರಿ ಶಾಲೆಗಳಲ್ಲಿ ಜಾರಿಯಲ್ಲಿದ್ದ ಈ ಕಾರ್ಯಕ್ರಮವನ್ನು ಖಾಸಗೀ ಅನುದಾನಿತ ಶಾಲೆಗಳಿಗೂ ವಿಸ್ತರಿಸಲಾಯಿತು. ಸಹನಿರ್ದೇಶಕರು (ಮಧ್ಯಾಹ್ನ ಉಪಹಾರ ಯೋಜನೆ), ಸಾರ್ವಜನಿಕ ಶಿಕ್ಷಣ ಇಲಾಖೆ ಅವರು ಮೇಲೆ (4) ರಲ್ಲಿ ಓದಲಾದ ದಿನಾಂಕ: 12.10.2004ರ ತಮ್ಮ ಪತ್ರದಲ್ಲಿ ಬಿಡುಗಡೆ ಮಾಡಿರುವ ಅನುದಾನವು ಅಕ್ಟೋಬರ್ ಮಾಹೆಯವರೆವಿಗೂ ಲಭ್ಯವಿದ್ದು, ನಂತರದ ತಿಂಗಳುಗಳಿಗೆ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಸಹ ನಿರ್ದೇಶಕರು (ಮಧ್ಯಾಹ್ನ ಉಪಹಾರ ಯೋಜನೆ), ಸಾರ್ವಜನಿಕ ಶಿಕ್ಷಣ ಇಲಾಖೆ ಅವರ ಕೋರಿಕೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 120 ಎಂಎಂಎಸ್ 2004, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2004**

**(ಇಡಿ 72 ಸ್ಕೀಮರ (ಯೂನಿಕ್) 2004, ದಿನಾಂಕ: 06.12.2004)**

ಸರ್ಕಾರವು 2004-05ನೇ ಸಾಲಿನ ಅಕ್ಷರ ದಾಸೋಹ ಕಾರ್ಯಕ್ರಮದಡಿ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ ಒಂದರಿಂದ ಏಳನೆಯ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಬಿಸಿಯೂಟ ನೀಡುವ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಒದಗಿಸಿರುವ ಅನುದಾನದ ಮಿತಿಯೊಳಗೇ 80 ಕೋಟಿ ರೂ.ಗಳನ್ನು (ಎಂಬತ್ತು ಕೋಟಿ ರೂಪಾಯಿಗಳು ಮಾತ್ರ) ಸಾರ್ವಜನಿಕ ಶಿಕ್ಷಣ ಆಯುಕ್ತರು, ಬೆಂಗಳೂರು ಇವರಿಗೆ ಬಿಡುಗಡೆ ಮಾಡಿದೆ. ಇದಕ್ಕೆ ಸಂಬಂಧಿಸಿದ ವೆಚ್ಚವನ್ನು 2004-05ನೇ ಸಾಲಿಗೆ ಲೆಕ್ಕಶೀರ್ಷಿಕೆ 2202-04-800-1-35-059 ಅಡಿಯಲ್ಲಿ ನಿಗದಿ ಮಾಡಿರುವ ಆಯವ್ಯಯದ ಮಿತಿಯೊಳಗೇ ಭರಿಸತಕ್ಕದ್ದು. ಸಾರ್ವಜನಿಕ ಶಿಕ್ಷಣ ಆಯುಕ್ತರು, ಬೆಂಗಳೂರು ಇವರು ಈ ಅನುದಾನವನ್ನು ಅಗತ್ಯಕ್ಕನುಗುಣವಾಗಿ ಜಿಲ್ಲೆಗಳಿಗೆ ಬಿಡುಗಡೆ ಮಾಡಲು ಅಧಿಕಾರ ನೀಡಿದೆ.

ಈ ಕಾರ್ಯಕ್ರಮದ ಸಮರ್ಪಕ ಮತ್ತು ಸಕಾಲಿಕ ಅನುಷ್ಠಾನದ ಬಗ್ಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಉಸ್ತುವಾರಿ ವಹಿಸತಕ್ಕದ್ದು. ಉಳಿದಂತೆ ದಿನಾಂಕ: 01.09.2004 ಹಾಗೂ 01.10.2004ರ ಸರ್ಕಾರಿ ಆದೇಶಗಳಲ್ಲಿ ನೀಡಲಾದ ಸೂಚನೆಗಳೇ ಅನ್ವಯಿಸುತ್ತವೆ.

ಅ.ಟಿ. ಸಂಖ್ಯೆ: ಆಇ 966 ವೆಚ್ಚ-8:2004, ದಿನಾಂಕ: 04.12.2004 ರಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1381 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ವಿಷಯ:** ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಮಾನ್ಯತೆಯನ್ನು ನೀಡುವುದಕ್ಕೆ ಸಂಬಂಧಿಸಿದ ನಿಗದಿತ ಕಾರ್ಯ ವಿಧಾನವನ್ನು ಸರಳೀಕರಿಸಲು ಮತ್ತು ಬಾಕಿಯಿರುವ ಮಾನ್ಯತೆಗೆ ಸಂಬಂಧಿಸಿದ ಪ್ರಕರಣಗಳನ್ನು ಕಾಲಕಾಲಕ್ಕೆ ಪುನರಾವಲೋಕಿಸಲು ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ದಿನಾಂಕ 29-9-2004ರ ಅ.ಸ.ಪತ್ರ ಸಂಖ್ಯೆ: ಇಡಿ 104 ಎಸ್ ಇಎಸ್ 2004.
2. ನಿರ್ದೇಶಕರು (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ದಿ: 19.10.2004ರ ಪತ್ರ ಸಂಖ್ಯೆ: C.8(4)Sh.Shi.ha.Reg>Misc.23.2004-05.

1. ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಮಾನ್ಯತೆಯನ್ನು ನೀಡುವುದಕ್ಕೆ ಸಂಬಂಧಿಸಿದ ನಿಗದಿತ ಕಾರ್ಯ ವಿಧಾನವನ್ನು ಸರಳೀಕರಿಸುವ ಕುರಿತು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ನೀಡಲು ಹಾಗೂ ಮಾನ್ಯತೆಗೆ ಸಂಬಂಧಿಸಿದ ಬಾಕಿ ಇರುವ ಅರ್ಜಿಗಳ

ಪುನರಾವಲೋಕನೆ ಮತ್ತು ಉಸ್ತುವಾರಿ (periodical review and monitoring) ಕಾಲಕಾಲಕ್ಕೆ ಮಾಡಲು ಸಮಿತಿಯನ್ನು ರಚಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ 29-9-2004ರ ಸರ್ಕಾರಿ ಪತ್ರದನ್ವಯ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ತಿಳಿಸಲಾಗಿತ್ತು. ಈ ವಿಷಯದಲ್ಲಿ ಒಂದು ಸರ್ಕಾರಿ ಆದೇಶವನ್ನು ಹೊರಡಿಸಿ, ಸದರಿ ಸಮಿತಿಯನ್ನು ರಚಿಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಡಿ 104 ಎಸ್ ಇಎಸ್ 2004, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

2. ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಮಾನ್ಯತೆಯನ್ನು ನೀಡುವುದಕ್ಕೆ ಸಂಬಂಧಿಸಿದ ನಿಗದಿತ ಕಾರ್ಯ ವಿಧಾನವನ್ನು ಸರಳೀಕರಿಸುವ ಕುರಿತು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ನೀಡಲು ಹಾಗೂ ಮಾನ್ಯತೆಗೆ ಸಂಬಂಧಿಸಿದ ಬಾಕಿ ಅರ್ಜಿಗಳ ಪುನರ ಅವಲೋಕನೆ ಮತ್ತು ಉಸ್ತುವಾರಿ ಕಾಲಕಾಲಕ್ಕೆ ಮಾಡಲು (to periodically review and monitor) ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ಈ ಮೂಲಕ ಸರ್ಕಾರ ರಚಿಸಿದೆ:-

| | | |
|---|---|---|
| 1 | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು. | ಅಧ್ಯಕ್ಷರು |
| 2 | ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು. | ಸದಸ್ಯರು |
| 3 | ನಿರ್ದೇಶಕರು (ಪ್ರಾಥಮಿಕ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು. | ಸದಸ್ಯರು |
| 4 | ಶ್ರೀ ಜಿ.ಎಸ್. ಶರ್ಮ, ಅಧ್ಯಕ್ಷರು, ಕರ್ನಾಟಕ ಅನ್ ಏಡೆಡ್ ಸ್ಕೂಲ್ಸ್ ಮ್ಯಾನೇಜ್‌ಮೆಂಟ್ ಅಸೋಸಿಯೇಷನ್,ಬೆಂಗಳೂರು. | ಸದಸ್ಯರು |
| 5 | ಶ್ರೀ ಕೆ.ಎಸ್. ಕೃಷ್ಣ ಅಯ್ಯರ್, ಪ್ರಧಾನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಮಾನ್ಯತೆ ಪಡೆದ ಆಂಗ್ಲ ಮಾಧ್ಯಮ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಅಧಿಕಾರಿ ವರ್ಗಗಳ ಸಂಯೋಜನೆ. | ಸದಸ್ಯರು |
| 6 | ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ, ಬೆಂಗಳೂರು. | ಸಂಯೋಜಕರು (Convener) |

3. ಸದರಿ ಸರಳೀಕರಣಕ್ಕೆ ಸಂಬಂಧಿಸಿದಂತೆ, ತನ್ನ ಶಿಫಾರಸ್ಸುಗಳನ್ನು ಸಮಿತಿಯು ಒಂದು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಮಾನ್ಯತೆಗೆ ಸಂಬಂಧಿಸಿದ ಬಾಕಿ ಅರ್ಜಿಗಳ ಪುನರಾವಲೋಕನೆ ಹಾಗೂ ಉಸ್ತುವಾರಿ (reviewing and monitoring)ಗೆ ಸಂಬಂಧಿಸಿದಂತೆ, ಸಮಿತಿಯು ಕನಿಷ್ಟ ಮೂರು ತಿಂಗಳಿಗೊಮ್ಮೆ ಸಭೆ ಸೇರಿ, ಬಾಕಿ ಅರ್ಜಿಗಳ ವಿಲೇವಾರಿಯ ಬಗ್ಗೆ ಪುನರಾವಲೋಕನೆ ಮತ್ತು ಉಸ್ತುವಾರಿಯನ್ನು ಮಾಡತಕ್ಕದ್ದು.

5. ಪ್ರಸ್ತುತ ಸಮಿತಿಯ ಕಾರ್ಯಾವಧಿ ಸರ್ಕಾರದ ಮುಂದಿನ ಆದೇಶದವರೆಗೆ ಇರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಲಿಂಗಯ್ಯ**

ಪಿ.ಆರ್. 1382 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ಶ್ರೀ ಎಂ.ಎಂ.ಗಡಗಲಿ, ಪ್ರಥಮ ದರ್ಜೆ ಸಹಾಯಕ, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಬೆಳಗಾಂ, ಇವರು ದಂಡನಾದೇಶದ ವಿರುದ್ಧ ಘನವೆತ್ತ ರಾಜ್ಯಪಾಲರಿಗೆ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 18ರ ಮೇರೆಗೆ ಸಲ್ಲಿಸಲಾದ ಮೇಲ್ಮನವಿ-ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ:ಇಡಿ 146 ಡಿಜಿಡಿ 98 ದಿ:13.3.2003.
2. ಶ್ರೀ ಎಂ.ಎಂ.ಗಡಗಲಿ, ಇವರ ಮನವಿ ದಿ:15.12.2003.

**ಸರ್ಕಾರದ ಆದೇಶ ಸಂಖ್ಯೆ: ಇಡಿ 114 ಡಿಜಿಡಿ 2003 ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್ 2004**

ಬೆಳಗಾಂ, ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ 1995 ನೇ ಸಾಲಿನಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ವಿಶೇಷ ನೇಮಕಾತಿಯಲ್ಲಿ 29 ವರ್ಷ ವಯೋಮಿತಿ ಮೀರಿದ ಅಭ್ಯರ್ಥಿಗಳಿಗೆ ಮಾತ್ರ ಶಿಕ್ಷಕರ ಹುದ್ದೆಗೆ ನೇಮಕಾತಿಗಾಗಿ ಪ್ರಕಟಣೆ ನೀಡಿದಾಗ, ಈ ಪ್ರಕಟಣೆಗೆ ಶ್ರೀಮತಿ ಉಷಾ ಮಲ್ಲಪ್ಪ ಸೋಮಣ್ಣವರ್ ಎಂಬ ಅಭ್ಯರ್ಥಿನಿಯು ಪ್ರಕಟಣೆ ನೀಡಿದ ದಿನಾಂಕದಂದು 29 ವರ್ಷ ವಯಸ್ಸು ಆಗದಿದ್ದರೂ ಸಹ, ಆಕೆಯ ಹುಟ್ಟಿದ ದಿನಾಂಕ 21.5.1967 ಎಂದು ಎಸ್.ಎಸ್.ಎಲ್.ಸಿ. ಅಂಕಿಪಟ್ಟಿಯಲ್ಲಿ ಇರುವುದನ್ನು ದಿ:20.2.1966 ಎಂಬುದಾಗಿ ತಿದ್ದುಪಡಿ ಮಾಡಲು ಆಕೆಯು, ಉಪನಿರ್ದೇಶಕರಿಗೆ ಅರ್ಜಿಯನ್ನು ಸಲ್ಲಿಸಿದ್ದು, ಅದು ತಿದ್ದುಪಡಿ ಆಗುವ ಮೊದಲೇ ನಿಯಮಬಾಹಿರವಾಗಿ ತಾತ್ಕಾಲಿಕ ಆಯ್ಕೆ ಪಟ್ಟಿ:ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಕೆಯ ಹುಟ್ಟಿದ ದಿನಾಂಕ:20.2.1966 ಎಂಬುದಾಗಿ ನಮೂದಿಸಿ ಶಿಕ್ಷಕರ ಹುದ್ದೆಗೆ ಆಯ್ಕೆ ಮಾಡಲು ಕಾರಣರಾದ ಅಧಿಕಾರಿ:ನೌಕರರ ವಿರುದ್ಧ ಶಾಸನಬದ್ಧ ಇಲಾಖಾ ವಿಚಾರಣೆಯನ್ನು ನಡೆಸಲಾಗಿದ್ದು, ವಿಚಾರಣೆಯಲ್ಲಿ ಶ್ರೀ ಎಂ.ಎಂ.ಗಡಗಲಿ, ಪ್ರಥಮ ದರ್ಜೆ ಸಹಾಯಕ, ಇವರು ನೇಮಕಾತಿ ಸಮಿತಿಯಲ್ಲಿ ಕಾರ್ಯನಿರ್ವಹಿಸಿ, ದುರುದ್ದೇಶದಿಂದ ಶ್ರೀಮತಿ ಉಷಾ ಮಲ್ಲಪ್ಪ ಸೋಮಣ್ಣವರ್, ಇವರು ಶಿಕ್ಷಕರ ಹುದ್ದೆಗೆ ನೇಮಕವಾಗಲು ಎಲ್ಲಾ ದಾಖಲಾತಿಗಳಲ್ಲಿ ಮತ್ತು ಚೆಕ್ ಲಿಸ್ಟ್‌ಗಳಲ್ಲಿ ಆಕೆಯ ಹುಟ್ಟಿದ ದಿನಾಂಕವನ್ನು 20.2.1966 ಎಂಬುದಾಗಿ ನಮೂದಿಸಿ, ದುರ್ನಡತೆ ಎಸಗಿರುವುದು ಸಾಬೀತಾಗಿದ್ದರಿಂದ ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ:13.3.2003 ರ ಸರ್ಕಾರಿ ಆದೇಶದ ಮೂಲಕ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 8(iii) ಅಡಿಯಲ್ಲಿ ಅವರ ಮುಂದಿನ 1 ವಾರ್ಷಿಕ ಮುಂಬಡ್ತಿ ವೇತನವನ್ನು ಸಂಚಿತ ಪರಿಣಾಮದೊಂದಿಗೆ ತಡೆ ಹಿಡಿಯುವ ದಂಡನೆ ವಿಧಿಸಲಾಗಿತ್ತು.

ಶ್ರೀ ಎಂ.ಎಂ. ಗಡಗಲಿ ಇವರು ದಿನಾಂಕ:15.12.2003 ರಂದು ದಂಡನೆ ಆದೇಶದ ವಿರುದ್ಧ ಸಿಸಿಎ ನಿಯಮ 18 ರ ಅಡಿಯಲ್ಲಿ ಘನವೆತ್ತ ರಾಜ್ಯಪಾಲರಿಗೆ ಅಪೀಲನ್ನು ಸಲ್ಲಿಸಿದ್ದು, ಅಪೀಲಿನಲ್ಲಿ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಿರುವರು.

1. ಶ್ರೀ ಜಿ.ಎಂ.ಪಾಟೀಲ್, ಇವರು ಬೆಳಗಾಂ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ನಡೆದಂತಹ ಘಟನೆಯಾಗಿದೆ. ಇವರ ನಂತರ ಶ್ರೀ ಎಸ್.ಡಿ.ಭಟ್, ಇವರು ಉಪನಿರ್ದೇಶಕರಾಗಿ ಕಾರ್ಯಭಾರವಹಿಸಿಕೊಂಡಿದ್ದು, ಇವರಿಬ್ಬರನ್ನು ಜಂಟಿ ಇಲಾಖಾ ವಿಚಾರಣೆಗೆ ಒಳಪಡಿಸಿಲ್ಲ. ಇದರಿಂದಾಗಿ ಸ್ವಾಭಾವಿಕ ನ್ಯಾಯ ಉಲ್ಲಂಘನೆಯಾಗಿದೆ.
2. ಪ್ರಕರಣದಲ್ಲಿ ಹುಟ್ಟಿದ ದಿನಾಂಕವನ್ನು ತಿದ್ದುಪಡಿ ಮಾಡಿಸಿಕೊಳ್ಳಲು ಶ್ರೀಮತಿ ಉಷಾ ಮಲ್ಲಪ್ಪ ಸೋಮಣ್ಣವರ್ ಇವರು ನೇರ ಕಾರಣರಾಗಿದ್ದರು. ಆದರೆ ಇವರನ್ನು ಜಂಟಿ ಇಲಾಖಾ ವಿಚಾರಣೆಗೆ ಒಳಪಡಿಸದೇ ಇರುವುದು ಸ್ವಾಭಾವಿಕ ನ್ಯಾಯಕ್ಕೆ ವಿರುದ್ಧವಾಗಿದೆ.

3. ನಾನು ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿದ್ದೇನೆ. ವಿಚಾರಣಾಧಿಕಾರಿಗಳು ಕೇವಲ 2 ನಿಮಿಷಗಳಲ್ಲಿ ವಿಚಾರಣೆ ಮುಕ್ತಾಯ ಮಾಡಿದ್ದಾರೆ. ಮಂಡನಾಧಿಕಾರಿ ಯಾವುದೇ ಪ್ರಶ್ನೆ ಕೇಳಿಲ್ಲ. ಹಾಗೂ ಯಾವುದೇ ದಾಖಲಾತಿ ಹಾಜರುಪಡಿಸಿಲ್ಲ ಹಾಗೂ ಸಾಕ್ಷಿ ಪಡೆದಿಲ್ಲ. ಶಿಸ್ತು ಪ್ರಾಧಿಕಾರಿಯು ಏಕಮುಖವಾಗಿ ನಿರ್ಣಯ ಕೈಗೊಂಡಿದೆ. ವಿಚಾರಣೆಯ ಸಂದರ್ಭದಲ್ಲಿ ನನ್ನ ಲಿಖಿತ ಹೇಳಿಕೆ ತೆಗೆದುಕೊಳ್ಳಲು ಅವಕಾಶ ಕೊಟ್ಟಿಲ್ಲ. ಕ್ರಾಸ್ ಎಕ್ಸಮಿನ್ ಮಾಡಲು ಅವಕಾಶ ನೀಡಿಲ್ಲ. ಇದರಿಂದಾಗಿ ಸ್ವಾಭಾವಿಕ ನ್ಯಾಯ ಉಲ್ಲಂಘನೆ.
4. ಹುಟ್ಟಿದ ದಿನಾಂಕ ತಿದ್ದುಪಡಿ ಮಾಡಲು ಉಪನಿರ್ದೇಶಕರ ಕಚೇರಿಯಲ್ಲಿ 5 ಶಾಖೆಗಳ ಹಂತದಲ್ಲಿ ಕಡತ ಚಲನವಲನವಾಗುತ್ತದೆ. ಈ ಪ್ರಕರಣದಲ್ಲಿ ನನ್ನನ್ನು ತೊಡಗಿಸಿಕೊಂಡಿಲ್ಲ. ಆದಾಗ್ಯೂ ಸಹ ಆಪಾದಿತನೆಂದು ಮಾಡಲಾಗಿದೆ. ಇದು ಸ್ವಾಭಾವಿಕ ನ್ಯಾಯಕ್ಕೆ ವಿರುದ್ಧ ವಾಗಿದೆ. ನೇಮಕಾತಿಯ ಅರ್ಜಿ ಪರಿಶೀಲನೆ ಕೆಲಸ ನಿರ್ವಹಿಸಿಲ್ಲ.
5. ದಿನಾಂಕ:13.3.2003 ರ ಸರ್ಕಾರಿ ಆದೇಶದಲ್ಲಿ ಶ್ರೀ ಕಾಂಬ್ಳೆ ಹಾಗೂ ಶ್ರೀ ಕೋಕಿತ್‌ಕರ್ ಇವರುಗಳಿಗೆ ವಾಗ್ದಂಡನೆ ನೀಡಲಾಗಿದೆ. ಶ್ರೀ ಗಂಗಪ್ಪನವರ್, ಶ್ರೀ ಕಾಂಬ್ಳೆ, ಶ್ರೀ ಗಡಗಲಿ ಇವರುಗಳಿಗೆ 1 ವಾರ್ಷಿಕ ಮುಂಬಡ್ತಿ ವೇತನವನ್ನು ತಡೆಹಿಡಿಯಲಾಗಿದೆ. ಇದನ್ನು ಅವಗಾಹಿಸಿದಾಗ ಶಿಸ್ತು ಪ್ರಾಧಿಕಾರಿಯು ಸಾಬೀತಾದ ಆರೋಪಕ್ಕೆ ತಕ್ಕಂತೆ ದಂಡನೆ ವಿಧಿಸದೇ ಇರುವುದು ಕಂಡುಬಂದಿದೆ.

5ಎ. ಉಪನಿರ್ದೇಶಕರು ನೇಮಕಾತಿ ಪ್ರಾಧಿಕಾರಿಯಾಗಿದ್ದು, ಇವರನ್ನು ಆಪಾದಿತರನ್ನಾಗಿ ಮಾಡಿಲ್ಲ.

5ಬಿ. ಶ್ರೀ ಗಡಗಲಿ ಇವರು ನೇಮಕಾತಿ ಸಮಿತಿಯಲ್ಲಿ ಕಾರ್ಯನಿರ್ವಹಿಸದೇ ಇದ್ದರೂ ಆಪಾದಿತರನ್ನಾಗಿ ಮಾಡಿ ಗುರುತರವಾದ ದಂಡನೆ ವಿಧಿಸಲಾಗಿದೆ.

5ಡಿ. ಶ್ರೀಮತಿ ಎಸ್.ಎಲ್.ಸತ್ತಿಗೇರಿ, ನಿವೃತ್ತ ಮುಖ್ಯ ಶಿಕ್ಷಕರು, ಇವರು ಹುಟ್ಟಿದ ದಿನಾಂಕವನ್ನು ತಿದ್ದುಪಡಿ ಮಾಡಲು ಕಾರಣರಾಗಿದ್ದರೂ ಸಹ ಇವರನ್ನು ದೋಷಮುಕ್ತರನ್ನಾಗಿ ಮಾಡಲಾಗಿದೆ. ಬಿಇಒ ಆದ ಶ್ರೀ ಬಿ.ವೈ. ನಾಯಕ್ ಇವರು ಒತ್ತಡ ಹಾಕಿ, ಹುಟ್ಟಿದ ದಿನಾಂಕವನ್ನು ತಿದ್ದುಪಡಿ ಮಾಡಲು ಕಾರಣರೆಂದು ಶ್ರೀಮತಿ ಸತ್ತಿಗೇರಿ ಇವರು ತಿಳಿಸಿದ್ದರೂ ಸಹ ಶ್ರೀಮತಿ ಸತ್ತಿಗೇರಿ ಇವರನ್ನು ದೋಷಮುಕ್ತರನ್ನಾಗಿ ಸಿರುವುದು ಸ್ವಾಭಾವಿಕ ನ್ಯಾಯಕ್ಕೆ ವಿರುದ್ಧವಾಗಿದೆ.

5ಇ. ಶ್ರೀ ಬಿ.ವೈ.ನಾಯಕ್ ಹಾಗೂ ಶ್ರೀ ಬಿ.ಆರ್. ಗಂಗಪ್ಪನವರ್, ಇವರುಗಳಿಗೆ ಮುಂದಿನ 1 ವಾರ್ಷಿಕ ಮುಂಬಡ್ತಿ ವೇತನವನ್ನು ದಂಡನೆಯಾಗಿ ವಿಧಿಸಿದೆ. ಶ್ರೀ ಕಾಂಬ್ಳೆ ಹಾಗೂ ಶ್ರೀ ಕೋಕಿತ್‌ಕರ್ ಇವರುಗಳಿಗೆ ವಾಗ್ದಂಡನೆ ವಿಧಿಸಿದೆ. ನಾನು ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗಿಯಾಗಿಲ್ಲದಿದ್ದರೂ ನನಗೆ ದಂಡನೆ ವಿಧಿಸಿರುವುದು ಸ್ವಾಭಾವಿಕ ನ್ಯಾಯಕ್ಕೆ ವಿರುದ್ಧವಾಗಿದೆ. ಆದ್ದರಿಂದ ನನ್ನ ಮನವಿಯನ್ನು ಪುರಸ್ಕರಿಸಿ ದೋಷಮುಕ್ತರನ್ನಾಗಿಸುವಂತೆ ಕೋರುತ್ತೇನೆ.

ಘನವೆತ್ತ ಕರ್ನಾಟಕ ರಾಜ್ಯಪಾಲರು, ಶ್ರೀ ಎಂ.ಎಂ.ಗಡಗಲಿ ಇವರು ಸಲ್ಲಿಸಿದ ಮೇಲ್ಮನವಿಯನ್ನು, ಶಿಸ್ತು ಕ್ರಮಕ್ಕೆ ಸಂಬಂಧಿಸಿದ ದಾಖಲೆಗಳೊಂದಿಗೆ ಪರಾಮರ್ಶಿಸಿ, ಈ ಕೆಳಕಂಡಂತೆ ಆದೇಶ ಮಾಡಿರುವರು:-

"I have gone through the appeals submitted by Sri B.R.Gangappanavar, Block Education Officer, Athani, Belgaum Dist.(Government file No.ED 113 DGD 2003) and Sri M.M.Gadagali, First Division Assistant, College of Teachers' Education, Belgaum, (Government file No.ED 114 DGD 2003) against the orders of Government as the disciplinary authority vide No.ED 146 DGD 1998, dated:13.3.2003, imposing a penalty of withholding of one annual increment with cumulative effect on the appellants.

Having gone through all the connected records in detail, I find that the contentions advanced by the appellants are not justified. Also the penalty imposed on both the appellants is of withholding one annual increment with cumulative effect which is commensurate with the charges established against them. Hence, I dismiss both the appeals for lack of merit and uphold the orders of the disciplinary authority i.e., the Government."

**T.N.CHATURVEDI 19/10/2004**
GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್.ಸಂಬರಗಿ**

ಪಿ.ಆರ್. 1383 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇ-1, 2)

**ವಿಷಯ:** ಶ್ರೀ ಆರ್.ಎಂ.ಬೀರಾದಾರ್, ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ದುಬಲಗುಂಡಿ, ಹುಮ್ನಾಬಾದ್ ತಾಲ್ಲೂಕ್, ಬೀದರ್ ಜಿಲ್ಲೆ, ಇವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ-ಅಂತಿಮ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಇಡಿ 42 ಡಿಜಿಡಿ 2003 ದಿ:13.5.2003 ಮತ್ತು ಅಧಿಸೂಚನೆ ದಿ:20.12.2003.
2. ಸೂಚನಾ ಪತ್ರ ಸಂ:ಇಡಿ 42 ಡಿಜಿಡಿ 2003 ದಿ:14.6.2004.
3. ಶ್ರೀ ಬೀರಾದಾರ್ ಇವರ ಪ್ರತಿರಕ್ಷಣಾ ಹೇಳಿಕೆ ದಿ:7.7.2004 ಮತ್ತು ದಿ:22.7.2004.

**ಪ್ರಸ್ತಾವನೆ:**

ಶ್ರೀ ಆರ್.ಎಂ.ಬೀರಾದಾರ್, ಇವರು ಪ್ರಾಂಶುಪಾಲರಾಗಿ ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ಬಸವಕಲ್ಯಾಣ ತಾ. ಬೀದರ್ ಜಿಲ್ಲೆ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೆಳಕಂಡ ಆರೋಪಗಳನ್ನು ಎಸಗಲು ನೇರಕಾರಣರಾಗಿರುವುದು ಪೂರ್ವಬಾವಿ ತನಿಖಾ ವರದಿಯಿಂದ ಮೇಲ್ನೋಟಕ್ಕೆ ಕಂಡುಬಂದ ಹಿನ್ನಲೆಯಲ್ಲಿ, ವಿಚಾರಣೆ ಕಾಯ್ದಿರಿಸಿ ಮೇಲೆ ಓದಲಾದ ಕ್ರಮಾಂಕ (1) ರ ದಿ:13.5.2003ರ ಸರ್ಕಾರಿ ಆದೇಶದ ಮೂಲಕ ಅಮಾನತ್ತಿನಲ್ಲಿಟ್ಟು ತದನಂತರ ದಿ:20.12.2003 ರ ಅಧಿಸೂಚನೆಯಲ್ಲಿ ವಿಚಾರಣೆ ಕಾಯ್ದಿರಿಸಿ ಅಮಾನತ್ತನ್ನು ತೆರವು ಮಾಡಿ ದುಬಲಗೊಂಡಿ, ಹುಮ್ನಾಬಾದ್ ತಾಲ್ಲೂಕ್ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿತ್ತು.

1. ಕಾಲೇಜಿನ ಪಾಠ-ಪ್ರವಚನ ನಿರ್ವಹಿಸಲು ಪ್ರಾಂಶುಪಾಲರು ಸೀಮೆಸುಣ್ಣ, ಕಪ್ಪುಹಲಗೆಯನ್ನು ಸ್ವಚ್ಛಗೊಳಿಸುವ ಬಟ್ಟೆಯು ಸೇರಿದಂತೆ ಯಾವುದೇ ಸೌಲಭ್ಯ ನೀಡುತ್ತಿಲ್ಲ. ಪಠ್ಯ ಕ್ರಮ ಜಾಸ್ತಿ ಇರುವ ಪ್ರಯುಕ್ತ ವಿಶೇಷ ತರಗತಿಗಳನ್ನು ತೆಗೆದುಕೊಳ್ಳುವ ಸಲುವಾಗಿ ಅನುಮತಿ ಕೋರಿರುವುದನ್ನು ತಿರಸ್ಕರಿಸಿದ್ದಾರೆ.

2. ಕನ್ನಡ ಭಾಷೆ ಇಲಾಖಾ ಪರೀಕ್ಷೆಗೆ ಸಂಬಂಧಿಸಿದ ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡಲು ನಿವೃತ್ತ ಉಪನ್ಯಾಸಕರಾದ ಶ್ರೀ ತುಳಸಿರಾವ್ ಇವರಿಂದ ರೂ.1500/- ಹಾಗೂ ಶ್ರೀ ಶಿವರಾಜ ಬೆಲಾಪೂರೆ, ಉಪನ್ಯಾಸಕರು ಇವರಿಂದ ರೂ.5200/- ಗಳನ್ನು ಪಡೆದಿರುವ ಬಗ್ಗೆ ಉಪನ್ಯಾಸಕರು ದೂರನ್ನು ಸಲ್ಲಿಸಿದ್ದಾರೆ.
3. ಕಾಲೇಜಿನಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಲು ಅವಕಾಶ ಕಲ್ಪಿಸದಿರುವುದು ಅಥವಾ ಇತರೇ ವಿಷಯ ಕುರಿತಂತೆ ಕಾರ್ಯಕ್ರಮ ನಡೆಸಲು ಪ್ರಾಂಶುಪಾಲರನ್ನು ಭೇಟಿ ಮಾಡಿದ್ದಲ್ಲಿ ಅವರು ಸಿಬ್ಬಂದಿಗಳನ್ನು ಬೆದರಿಸಿ ವಾರ್ಷಿಕ ಪರೀಕ್ಷೆಯಲ್ಲಿ ವಿದ್ಯಾರ್ಥಿಗಳನ್ನು ಅನುತ್ತೀರ್ಣಗೊಳಿಸುವುದಾಗಿ ಬೆದರಿಕೆ ಹಾಕುತ್ತಿರುವುದು. ಪ್ರಾಂಶುಪಾಲರ ಬೋಧನಾ ವಿಷಯವಾದ ಆಂಗ್ಲ ಭಾಷೆಯಲ್ಲಿ ಕೇವಲ 2 ಪಾಠವನ್ನು ಮಾತ್ರ ಮುಗಿಸಿರುತ್ತಾರೆ.
4. ಎಸ್.ಎಸ್.ಎಲ್.ಸಿ. ಪೂರಕ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಪ್ರಥಮ ಪಿಯುಸಿಗೆ ದಾಖಲಾಗಿ ವಿದ್ಯಾರ್ಥಿನಿಯರಿಂದ ಪ್ರಾಂಶುಪಾಲರು ವಿಳಂಬ ದಾಖಲಾತಿ ಶುಲ್ಕವೆಂದು ರೂ.240/- ಗಳನ್ನು ನಿಯಮಬಾಹಿರವಾಗಿ ಪಡೆದಿದ್ದು, ತದನಂತರ ನಿರ್ದೇಶಕರ ಆದೇಶದ ಮೇಲೆ ಹಿಂತಿರುಗಿಸುವಂತೆ ಸೂಚಿಸಿದ್ದರೂ ಸಹ ಹಣ ಹಿಂತಿರುಗಿಸಿಲ್ಲದಿರುವುದು.
5. ಕನ್ನಡ ಮಾಧ್ಯಮದ ಶಿಕ್ಷಕರನ್ನು ಸೇವೆಗೆ ಹಾಜರು ಪಡಿಸಿಕೊಳ್ಳಲು ತೊಂದರೆ ನೀಡುತ್ತಿರುವುದು.

ಆಪಾದಿತರಿಗೆ ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ:14.6.2004 ರಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಲಾಗಿತ್ತು. ಸದರಿಯವರು ಮೇಲೆ ಓದಲಾದ ಕ್ರಮಾಂಕ (3) ರಲ್ಲಿನ ಪತ್ರಗಳ ಮೂಲಕ ಪ್ರತಿರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿ ದಾಖಲಾತಿ ಗಳಿಂದ ಅಲ್ಲಗಳೆದಿದ್ದಾರೆ. ತಮ್ಮ ಮೇಲೆ ಮಾಡಲಾದ ಆರೋಪಗಳು ಉದ್ದೇಶಪೂರ್ವಕವಾಗಿ ಕಾಲೇಜಿನ ಸಿಬ್ಬಂದಿಗಳು ಮಾಡಿದ್ದು ಯಾವುದೇ ದುರ್ನಡತೆ ಎಸಗಿಲ್ಲವೆಂದು ಪ್ರತಿರಕ್ಷಣಾ ಹೇಳಿಕೆಯಲ್ಲಿ ತಿಳಿಸುತ್ತಾ ವಿಚಾರಣೆಯಿಂದ ಮುಕ್ತರನ್ನಾಗಿಸುವಂತೆ ಕೋರಿದ್ದರು.

ಆಪಾದಿತರು ಸಲ್ಲಿಸಿದ್ದ ಪ್ರತಿರಕ್ಷಣಾ ಹೇಳಿಕೆ ಹಾಗೂ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ ಹಾಗೂ ಸದರಿಯವರ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಸರ್ಕಾರವು ಒಪ್ಪಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 42 ಡಿಜಿಡಿ 2003, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಆರ್.ಎಂ.ಬೀರಾದಾರ್, ಪ್ರಾಂಶುಪಾಲರು, ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ಬಸವಕಲ್ಯಾಣ ತಾ. ಬೀದರ್ ಜಿಲ್ಲೆ, ಇವರ ಮೇಲಿನ ದೋಷಾರೋಪಣೆಯಿಂದ ಮುಕ್ತರನ್ನಾಗಿಸಿ ಆದೇಶಿಸಿದೆ. ಹಾಗೂ ಸದರಿಯವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕೆಸಿಎಸ್ ನಿಯಮಾವಳಿಗಳ ನಿಯಮ 100(3) ರನ್ವಯ ಕರ್ತವ್ಯದ ಮೇಲೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (1, 2)

ಪಿ.ಆರ್. 1384

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಕೆ.ಎನ್. ನಾಗರಾಜರೆಡ್ಡಿ, ವ್ಯವಸ್ಥಾಪಕರು, ಲಿಡ್ಕರ್, ಇವರ ನಿಯೋಜನಾ ಸೇವೆಯನ್ನು ದೇವರಾಜ ಅರಸು ಸಂಶೋಧನಾ ಸಂಸ್ಥೆಯ ಆಡಳಿತಾಧಿಕಾರಿ ಹುದ್ದೆಯಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಕಇ 155 ಬಿಸಿಎ 2001, ದಿನಾಂಕ: 3.1.2002.
2. ಸರ್ಕಾರದ ಆದೇಶ ಸಂಖ್ಯೆ: ಸಕಇ 183 ಬಿಸಿಎ 2002, ದಿನಾಂಕ: 13.12.2002.
3. ಸರ್ಕಾರದ ಆದೇಶ ಸಂಖ್ಯೆ: ಸಕಇ 162 ಬಿಸಿಎ 2003, ದಿನಾಂಕ: 2.1.2004.
4. ನಿರ್ದೇಶಕರು, ದೇವರಾಜ ಅರಸು ಸಂಶೋಧನಾ ಸಂಸ್ಥೆ ಇವರ ಪತ್ರಸಂಖ್ಯೆ: ದೇಸಂಸಂ/ಅವೈಕ/ಕಮೇ/ಸಿಆರ್-24/ 2001-02, ದಿನಾಂಕ: 12.10.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಕೆ.ಎನ್. ನಾಗರಾಜರೆಡ್ಡಿ, ವ್ಯವಸ್ಥಾಪಕರು (ವಸ್ತು ಪ್ರದರ್ಶನ ಮತ್ತು ರಫ್ತು) ಕರ್ನಾಟಕ ಚರ್ಮ ಕೈಗಾರಿಕೆ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರನ್ನು ಅವರದೇ ಆದ ಸ್ವಂತ ವೇತನ ಶ್ರೇಣಿಯಲ್ಲಿ ಶ್ರೀ ದೇವರಾಜ ಅರಸು ಸಂಶೋಧನಾ ಸಂಸ್ಥೆ, ಬೆಂಗಳೂರು ಇಲ್ಲಿ ತೆರವಿರುವ ಆಡಳಿತಾಧಿಕಾರಿ ಹುದ್ದೆಗೆ ಸದರಿಯವರು ಹಾಜರಾದ ದಿನಾಂಕದಿಂದ ಒಂದು ವರ್ಷದವರೆಗೆ ಪ್ರತಿ ನಿಯೋಜನಾ ಮೇರೆಗೆ ನಿಯೋಜನಾ ಷರತ್ತಿಗೆ ಒಳಪಟ್ಟು, ಮುಂದಿನ ಆದೇಶವಾಗುವವರೆಗೆ ನೇಮಿಸಲಾಗಿರುತ್ತದೆ.

ಮೇಲೆ (2) ಮತ್ತು (3) ರಲ್ಲಿ ಓದಲಾಗಿರುವ ಆದೇಶಗಳಲ್ಲಿ ಶ್ರೀ ಕೆ.ಎನ್. ನಾಗರಾಜರೆಡ್ಡಿ, ಆಡಳಿತಾಧಿಕಾರಿಗಳು, ದೇವರಾಜ ಅರಸು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ನಿಯೋಜನಾ ಸೇವೆಯನ್ನು ಕ್ರಮವಾಗಿ ದಿನಾಂಕ: 3.1.2003 ರಿಂದ 3.1.2004 ರವರೆಗೆ ಹಾಗೂ ದಿನಾಂಕ: 3.1.2004 ರಿಂದ ಅನ್ವಯವಾಗುವಂತೆ ಮುಂದಿನ ಒಂದು ವರ್ಷದವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (4) ರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು, ದೇವರಾಜ ಅರಸು ಸಂಶೋಧನಾ ಸಂಸ್ಥೆ ಇವರು ಶ್ರೀ ಕೆ.ಎನ್. ನಾಗರಾಜರೆಡ್ಡಿ ಆಡಳಿತಾಧಿಕಾರಿಗಳು ಸಂಸ್ಥೆಯ ಕಾರ್ಯಚಟುವಟಿಕೆಗಳ ಅನುಸಾರ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಹಾಗೂ ಸಂಸ್ಥೆಯಲ್ಲಿ ಅಧಿಕಾರಿಗಳ ಕೊರತೆ ಇರುವುದರಿಂದ, ಸದರಿ ಅಧಿಕಾರಿಯ ಸೇವೆಯು ಅಗತ್ಯವಾಗಿರುವುದಾಗಿ ತಿಳಿಸುತ್ತಾ, ಇವರ ನಿಯೋಜನಾ ಅವಧಿಯು ದಿನಾಂಕ: 3.1.2005ಕ್ಕೆ ಕೊನೆಗೊಳ್ಳಲಿರುವ ಕಾರಣ, ಇವರ ನಿಯೋಜನಾ ಸೇವೆಯನ್ನು ಮುಂದಿನ 2 ವರ್ಷಗಳ ಅವಧಿಯವರೆಗೆ ಮುಂದುವರೆಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ನಿರ್ದೇಶಕರು, ದೇವರಾಜ ಅರಸು ಸಂಶೋಧನಾ ಸಂಸ್ಥೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 139 ಬಿಸಿಎ 2004, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004**

ಕ್ರಮಸಂಖ್ಯೆ (1), (2) ಮತ್ತು 3 ರಲ್ಲಿ ಓದಲಾದ ಸರ್ಕಾರಿ ಆದೇಶಗಳು ದಿನಾಂಕ: 3.1.2002, 13.12.2002 ಮತ್ತು ದಿನಾಂಕ: 2.1.2004 ರಲ್ಲಿ ಆದೇಶಿಸಿರುವ ಶ್ರೀ ಕೆ.ಎನ್. ನಾಗರಾಜರೆಡ್ಡಿ, ಆಡಳಿತಾಧಿಕಾರಿಗಳು, ದೇವರಾಜ ಅರಸು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ನಿಯೋಜನಾ

ಸೇವೆಯನ್ನು ದಿನಾಂಕ: 3.1.2005 ರಿಂದ ಅನ್ವಯವಾಗುವಂತೆ ಮುಂದಿನ 2 ವರ್ಷಗಳವರೆಗೆ ಅಥವಾ ಸರ್ಕಾರದಿಂದ ಮುಂದಿನ ಆದೇಶವಾಗುವವರೆಗೆ ಅಂದರೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರವು ವಿಸ್ತರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರಗಳ ಪ್ರತ್ಯಾಯೋಜನೆ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್. 1387 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆಂಜನೇಯ ಎಹೆಚ್‌ಸಿ 5, ಡಿಎಆರ್, ಬಳ್ಳಾರಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಎಸ್.ಪಿ. ಬಳ್ಳಾರಿ ಜಿಲ್ಲೆ ರವರ ಅ.ಸಂ: 14:ಇವಿ:2002:67:2003-04, ದಿನಾಂಕ: 7.5.2003.-
2. ಐಜಿಪಿ ಪೂರ್ವ ವಲಯ, ದಾವಣಗೆರೆ ರವರ ಅ.ಸಂ: ಅಪೀಲು:18:2003-04 ಓಬಿ 212:2003-04, ದಿ: 11.2.2004.
3. ಅರ್ಜಿದಾರರ ಮನವಿ ದಿನಾಂಕ: 26.4.2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: ಅಪೀಲು: (2) 33:2004, ದಿ: 25.9.2004.

**ಪ್ರಸ್ತಾವನೆ:**

ಶ್ರೀ ಆಂಜನೇಯ, ಎಹೆಚ್‌ಸಿ 5, ಡಿಎಆರ್ ಬಳ್ಳಾರಿ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದಿನಾಂಕ: 21.01.2002 ರಿಂದ 4 ದಿನ ಸಿ.ಎಲ್. ಪಡೆದು ನಂತರ 21.1.2002 ರಿಂದ 23.10.2002ರ ವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಆಪಾದನೆಯ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ಸದರಿ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಾಗಿ ಒಂದು ವರ್ಷ ಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸಲ್ಲಿಸಿದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ ತಾನು ಸಿ.ಎಲ್. ಹೋಗಿದ್ದು ಆಕಸ್ಮಿಕವಾಗಿ ಕಾಮಾಲೆ ರೋಗಕ್ಕೆ ತುತ್ತಾಗಿದ್ದೇನೆ ಹಳ್ಳಿಯಲ್ಲಿ ನಾಟಿ ಔಷಧಿ ಪಡೆದಿರುತ್ತೇನೆ. ಈ ಬಗ್ಗೆ ಟೆಲಿಗ್ರಾಂ ಮೂಲಕ ತಿಳಿಸಿರುತ್ತೇನೆ ಹಳ್ಳಿಯಲ್ಲಿ ಚಿಕಿತ್ಸೆ ಪಡೆದಿದ್ದು ದಾಖಲಾತಿಸಿರುವುದಿಲ್ಲ ಎಂದೆಲ್ಲಾ ವಾದಿಸಿರುತ್ತಾರೆ 60 ದಿನಗಳ ಗೈರುಹಾಜರಾತಿಗೆ ಕಾಮಾಲೆ ರೋಗ ಕಾರಣ ತಿಳಿಸಿದ್ದು ಉಳಿದ 236 ದಿನಗಳ ಗೈರುಹಾಜರಿಗೆ ಯಾವುದೇ ಕಾರಣ ತಿಳಿಸಿಲ್ಲ. ಆದ್ದರಿಂದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 88 ಪೊಸಿಅ 2004, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆಂಜನೇಯ ಎಹೆಚ್‌ಸಿ 5, ಡಿಎಆರ್, ಬಳ್ಳಾರಿ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1389 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಶಿಕ್ಷಣ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ವಾಣಿಜ್ಯ ವಿಭಾಗದ ಮಂಜೂರಾತಿ ಕುರಿತು.

**ಓದಲಾಗಿದೆ:**
1. ಮುಖ್ಯ ಮಂತ್ರಿಯವರ ಟಿಪ್ಪಣಿ ಸಂಖ್ಯೆ: ಸಿಎಂ/ಡಿಎಸ್/11/4/2004, ದಿನಾಂಕ: 16.07.2004.
2. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಪೂಶಿಇ/ಸಿಬ್ಬಂದಿ/ವಾವಿಸ್ಥಳಾಂ/ 01/2004-05, ದಿನಾಂಕ: 26.08.2004.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಸುಮಾರು 700 ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದು, ಇಲ್ಲಿ ಕಲಾ ಮತ್ತು ವಿಜ್ಞಾನ ವಿಭಾಗವಿದೆ. ವಾಣಿಜ್ಯ ವಿಭಾಗದ ಅವಶ್ಯಕತೆಯಿರುವುದರಿಂದ, ವಿದ್ಯಾರ್ಥಿಗಳ ಕೊರತೆ ಎದುರಿಸುತ್ತಿದ್ದು, ರದ್ದುಪಡಿಸುತ್ತಿರುವ ಕಾಲೇಜಿನಿಂದ ವಾಣಿಜ್ಯ ವಿಭಾಗವನ್ನು ಹುದ್ದೆಗಳ ಸಮೇತ ಜೇವರ್ಗಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ವರ್ಗಾಯಿಸುವಂತೆ ಮೇಲೆ (1) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಆದೇಶಿಸಲಾಗಿದೆ.

ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ವಿದ್ಯಾರ್ಥಿಗಳ ಕೊರತೆ ಎದುರಿಸುತ್ತಿರುವ ಪದವಿ ಪೂರ್ವ ಕಾಲೇಜುಗಳ ವಿವರಗಳನ್ನು ನೀಡಿರುತ್ತಾರೆ. ಇದರಲ್ಲಿ ಚಿತ್ರದುರ್ಗ ಜಿಲ್ಲೆಯ ಚಿಕ್ಕಗೊಂಡನಹಳ್ಳಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ವಾಣಿಜ್ಯ ವಿಭಾಗದಲ್ಲಿ ಪ್ರಥಮ ಪಿ.ಯು. ತರಗತಿಯಲ್ಲಿ 3 ವಿದ್ಯಾರ್ಥಿಗಳು, ದ್ವಿತೀಯ ಪಿ.ಯು. ತರಗತಿಯಲ್ಲಿ 4 ವಿದ್ಯಾರ್ಥಿಗಳ ದಾಖಲಾತಿಯಿದೆಯೆಂದು ತಿಳಿಸಿರುತ್ತಾರೆ. ಆದುದರಿಂದ ಈ ವಾಣಿಜ್ಯ ವಿಭಾಗವನ್ನು ಹುದ್ದೆಗಳ ಸಮೇತ ಜೇವರ್ಗಿ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ವರ್ಗಾಯಿಸಲು ನಿರ್ಧರಿಸಲಾಯಿತು ಹಾಗೂ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 285 ಎಸ್‌ಹೆಚ್‌ಹೆಚ್ 2004, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್ 2004**

ಚಿತ್ರದುರ್ಗ ಜಿಲ್ಲೆಯ ಚಿಕ್ಕಗೊಂಡನಹಳ್ಳಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ವಾಣಿಜ್ಯ ವಿಭಾಗದಲ್ಲಿ ಕನಿಷ್ಟ ವಿದ್ಯಾರ್ಥಿಗಳ ದಾಖಲಾತಿ ಇಲ್ಲದಿರುವುದರಿಂದ, ಈ ಕಾಲೇಜಿನ ವಾಣಿಜ್ಯ ವಿಭಾಗವನ್ನು ಹುದ್ದೆಗಳ ಸಮೇತ ಗುಲ್ಬರ್ಗಾ ಜಿಲ್ಲೆಯ ಜೇವರ್ಗಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ

ಸ್ಥಳಾಂತರಿಸಲು ಈ ಮೂಲಕ ಆದೇಶಿಸಿದೆ. ಹಾಗೂ ಈ ಕಾಲೇಜಿನಲ್ಲಿ ವಾಣಿಜ್ಯ ವಿಭಾಗದಲ್ಲಿ ಅಭ್ಯಸಿಸುತ್ತಿರುವ ವಿದ್ಯಾರ್ಥಿಗಳಿಗೆ ಪರ್ಯಾಯ ವ್ಯವಸ್ಥೆಯನ್ನು ಮಾಡಲು ಸಹ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಸಿದ್ದಲಿಂಗಯ್ಯ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

ಪಿ.ಆರ್. 1388

**ಸಹಕಾರ ಸಚಿವಾಲಯ**

**ವಿಷಯ:** ರಾಜ್ಯದ ರೈತರಿಗೆ ಸಹಕಾರಿ ಕೃಷಿ ಪತ್ತಿನ ಸಂಸ್ಥೆಗಳು ಶೇಕಡ 6ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ನೀಡುವ ಬಗ್ಗೆ.

**ಪ್ರಸ್ತಾವನೆ:**

ದಿನಾಂಕ: 19.07.2004ರಂದು ಮಂಡಿಸಿದ 2004–05ನೇ ಸಾಲಿನ ಆಯವ್ಯಯದಲ್ಲಿ ಸಹಕಾರಿ ಕೃಷಿ ಪತ್ತಿನ ಸಂಸ್ಥೆಗಳು ದಿನಾಂಕ:01.04.2004ರಿಂದ ರಾಜ್ಯದ ರೈತರಿಗೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಶೇಕಡ 6ರ ಬಡ್ಡಿ ದರದಲ್ಲಿ ನೀಡತಕ್ಕದೆಂದು ಘೋಷಿಸಿ ಅದರ ಸಲುವಾಗಿ ಸರ್ಕಾರದ ವತಿಯಿಂದ 60 ಕೋಟಿ ರೂಗಳನ್ನು ಒದಗಿಸಲಾಗಿದೆ. ಈ ಬಗ್ಗೆ ರೂಪಿಸಲಾದ ವಿವರವಾದ ಯೋಜನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 107 ಸಿಎಲ್‌ಎಸ್ 2004 ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2004**

ಮೇಲೆ ವಿವರಿಸಲಾದ ಪರಿಸ್ಥಿತಿಯಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ರೈತರಿಗೆ ಶೇಕಡ 6ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳನ್ನು ಅನುಬಂಧದಲ್ಲಿ ಲಗತ್ತಿಸಿರುವ ಯೋಜನೆಯ ಪ್ರಕಾರ ಕೆಳಕಂಡ ಷರತ್ತುಗಳಿಗೊಳಪಟ್ಟು ಒದಗಿಸಲು ಮಂಜೂರಾತಿ ನೀಡಲಾಗಿದೆ.

1) ಈ ಯೋಜನೆಯು ದಿನಾಂಕ: 01.04.2004ರಿಂದ ಸಹಕಾರ ಪತ್ತಿನ ಸಂಸ್ಥೆಗಳು ನೀಡುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳಿಗೆ ಮಾತ್ರ ಅನ್ವಯಿಸುತ್ತದೆ. ಆದರೆ ದಿನಾಂಕ: 01.04.2004ರ ಪೂರ್ವದಲ್ಲಿ ನೀಡಿರುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳಿಗೆ ಅನ್ವಯಿಸುವುದಿಲ್ಲ.
2) ಈ ಯೋಜನೆಯು ಸಹಕಾರ ಪತ್ತಿನ ಸಂಸ್ಥೆಗಳು ನೀಡುವ ಕೃಷಿಯೇತರ ಸಾಲಗಳಿಗೆ ಅನ್ವಯಿಸುವುದಿಲ್ಲ.
3) ಈ ಯೋಜನೆಯಡಿ ರೈತರಿಗೆ ಪ್ರಾಥಮಿಕ ಹಂತದಲ್ಲಿ ಸಹಕಾರ ಪತ್ತಿನ ಸಂಸ್ಥೆಗಳು ಒದಗಿಸುವ ಸಾಲಗಳ ಮೇಲೆ ಶೇಕಡ 5.5ರಷ್ಟು ಬಡ್ಡಿ ರಿಯಾಯಿತಿಯನ್ನು ಸರ್ಕಾರವು ಸಂಬಂಧಪಟ್ಟ ಜಿಲ್ಲಾ ಕೇಂದ್ರ ಸಹಕಾರ (ಡಿ.ಸಿ.ಸಿ.) ಬ್ಯಾಂಕುಗಳಿಗೆ ಮತ್ತು ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಕಾಸ್ಕಾರ್ಡ್) ಬ್ಯಾಂಕಿಗೆ ಒದಗಿಸುತ್ತದೆ. ಡಿಸಿಸಿ ಬ್ಯಾಂಕುಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಶೇಕಡ 4ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸತಕ್ಕದ್ದು. ಕಾಸ್ಕಾರ್ಡ್ ಬ್ಯಾಂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಪಿಕಾರ್ಡ್) ಬ್ಯಾಂಕುಗಳಿಗೆ ಶೇಕಡ 3.5ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸತಕ್ಕದ್ದು. ಸಹಕಾರ ಪತ್ತಿನ ಸಂಸ್ಥೆಗಳು ಅಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಹಾಗೂ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ(ಪಿಕಾರ್ಡ್) ಬ್ಯಾಂಕುಗಳು ಶೇಕಡ 6ರ ಬಡ್ಡಿ ದರದಲ್ಲಿ ರೈತರಿಗೆ ಕೃಷಿ ಸಾಲಗಳನ್ನು ಒದಗಿಸತಕ್ಕದ್ದು.
4) ಈ ಯೋಜನೆಯಡಿ ಸರ್ಕಾರದ ಬದ್ಧತೆಯು ಸಾಲಗಳ ಅವಧಿಗೆ ಮಾತ್ರ ಸೀಮಿತವಾಗಿರುತ್ತದೆ. ಅಂದರೆ ಸಾಲವನ್ನು ರೈತರಿಗೆ ನೀಡಿದ ದಿನಾಂಕದಿಂದ ರೈತರು ಸಾಲ ಮರುಪಾವತಿಸಬೇಕಾದ ದಿನಾಂಕದವರೆಗೆ ಸೀಮಿತವಾಗಿರುತ್ತದೆ. ಒಂದು ವೇಳೆ ರೈತರು ಸಕಾಲದಲ್ಲಿ ಸಾಲವನ್ನು ಮರುಪಾವತಿಸದೆ ಸುಸ್ತಿ ಆದಲ್ಲಿ ಸುಸ್ತಿಯಾದ ದಿನಾಂಕದಿಂದ ಸರ್ಕಾರದ ಬದ್ಧತೆ ಇರುವುದಿಲ್ಲ ಮತ್ತು ಸುಸ್ತಿಯಾದ ರೈತರು ಸಹಕಾರ ಕೃಷಿ ಪತ್ತಿನ ಸಂಸ್ಥೆಗಳಿಗೆ ಅವುಗಳ ಸಾಮಾನ್ಯ ಬಡ್ಡಿ ದರದಂತೆ ಮತ್ತು ಇತರ ಖರ್ಚುಗಳು ಇದ್ದಲ್ಲಿ ಅದರ ಸಹಿತ ಮರುಪಾವತಿಸಲು ಜವಾಬ್ದಾರರಾಗಿರುತ್ತಾರೆ.
5) ಅನುಬಂಧದಲ್ಲಿ ಲಗತ್ತಿಸಿರುವ ಯೋಜನೆಯ ಪ್ರಕಾರ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್, ಡಿಸಿಸಿ ಬ್ಯಾಂಕುಗಳು ಮತ್ತು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಹಾಗೂ ಕಾಸ್ಕಾರ್ಡ್ ಬ್ಯಾಂಕು ಮತ್ತು ಪಿಕಾರ್ಡ್ ಬ್ಯಾಂಕುಗಳು ರೈತರಿಗೆ ಸಾಲವನ್ನು ಶೇಕಡ 6ರ ಬಡ್ಡಿ ದರದಲ್ಲಿ ಒದಗಿಸಲು ಅಗತ್ಯವಾದ ಕ್ರಮವನ್ನು ಕೈಗೊಳ್ಳತಕ್ಕದ್ದು.
6) ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.
7) ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾಲಕಾಲಕ್ಕೆ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ನೀಡಿದ ಸೂಚನೆಗಳನ್ನು ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ಪಾಲಿಸತಕ್ಕದ್ದು.
8) ಈ ಯೋಜನೆಯಡಿ ಅನುದಾನದ ಬಿಡುಗಡೆಯು ಕರ್ನಾಟಕ ಆರ್ಥಿಕ ಸಂಹಿತೆಯ ಪರಿಚ್ಛೇದ 161(ಬಿ)(2), ಪರಿಚ್ಛೇದ 161(ಬಿ)(5)(ಋ)ರಡಿಯ ಟಿಪ್ಪಣಿ–2 ಹಾಗೂ ಪರಿಚ್ಛೇದ 161(ಬಿ)(6)(ಋ) ರ ಅವಕಾಶಗಳ ಪಾಲನೆಗೆ ಒಳಪಟ್ಟಿರುತ್ತದೆ.
9) ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಪುನರ್ಭರಣ ಬಿಲ್ಲುಗಳು ಆಡಿಟ್ ಆದನಂತರ ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ತ್ರೈಮಾಸಿಕ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗದಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
10) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ:869:ವೆಚ್ಚ–2:2004, ದಿನಾಂಕ: 8.12.2004ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎಸ್.ಹುಚ್ಚಾಚಾರಿ
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 107 ಸಿಎಲ್‌ಎಸ್ 2004 ಬೆಂಗಳೂರು, ದಿನಾಂಕ: 10.12.2004.**

**ಅನುಬಂಧ**

**CONCESSION TO FARMERS**

**I. SCHEME:-** Financial assistance to Agricultural Co-Operative Credit Institutions (PACS/DCC Banks/ PCARDBs/KSCARD and KSC Apex Bank) to enable them to lend agricultural Loans (ST,MT & LT Loans) to the farmers at 6%.

**II. OBJECTIVE:-** The main objective of the scheme is to extend substantial relief to the farmers by reducing the heavy interest burden on agricultural loans provided by Co-operative Credit Institutions.

**III. Definitions:**

(1) Primary Agriculture Credit Society (PACS) means Primary Agriculture Credit Co-Operative Society by whatever name called namely Vyvasaya Seva Sahakari Sangha Niyamita, Vyvasaya Seva Sahakari Bank Niyamita, Prathamika Krushi Pathina Sahakara Sangha Niyamita, Prathamika Krushi Pathina Sahakara Bank Niyamita, Farmers Service Co-Operative Society Niyamita, Raitha Seva Sahakara Sangha Niyamita etc., The PACS may be ceded to the DCC Bank or the Commercial Bank as the case may be.

(2) District Co-operative Central Bank (DCC Bank) means District Co-operative Central Bank situated at District Headquarters providing Short and Medium Term Loans to the PACS.

(3) The Primary Co-Operative Agricultural and Rural Development Bank (PCARD Bank) means the Primary Co-operative Agricultural and Rural Development Bank normally situated at Taluk Headquarters providing agricultural loans to the farmers for various purposes.

(4) Karnataka State Co-Operative Agriculture and Rural Development Bank (KASCARD Bank) means Karnataka State Co-Operative Agriculture and Rural Development Bank situated at Bangalore providing long term agricultural loans to the farmers through PCARD Banks.

(5) Karnataka State Co-Operative Apex Bank (Apex Bank) means Karnataka State Co-Operative Apex Bank Ltd., situated at Bangalore providing Short term and Medium term loans to the farmers through DCC Banks for various purposes.

**IV. Beneficiaries:** The Scheme would benefit around 10.25 lakh farmers availing short term, medium term and long term loans for various agricultural Operations from Co-Operative Credit Institutions.

**V. Application of the Scheme:-** As per the scheme, agricultural loans i.e., ST.MT loans advanced by PACS/DCC Banks and PCARDBS and long term loans advanced by the PCARD Banks w.e.f 01.04.2004 are covered.

This Scheme is not applicable to non-farm sector loans. This is also not applicable to loans given to the farmers earlier to 01.04.2004

**VI. Present status of lending rates:-** At present agricultural loans are being provided by the Primary Lending institutions to the farmers at varying rates that are around 12.5% in respect of Short Term / Medium Term loans and 13.5% in respect of LT Loans. As such in order to provide these agricultural loans at 6%, the Government has to meet the differential cost in the form of subsidy to be sanctioned to the PACS/DCC Banks/PCARD Banks.

**VII. Funding by the Government:-** The novelty of the scheme is reduction in the rate of interest on agricultural loans to 6% and making a firm commitment by the Government to provide interest subsidy at 5.5% on the loans sanctioned by the cooperative credit institutions and to provide adequate provision in the budget every year for reimbursing the said interest subsidy to the cooperative credit institutions. The interest subsidy payable as per the scheme is limited to the period which is normally allowed for repayment of loans. The liability of Government under this scheme starts from the date of sanction/release of loan to the farmers and extends upto the due date of repayment during the loan period. However if the farmer fails to repay the amount on the due date and becomes a defaulter, he shall be liable to pay the normal rate of interest and other charges if any for the defaulted period.

There is a gestation period of around two years for repayment of principal in respect of long-term loans during which the farmer is required to pay only the interest. The benefit of the scheme is available during the gestation period also.

However, the cooperatives shall share the burden as follows.

**(1) ST Loan/MT Loan Average lending rate 12.5%**

Govt. will provide @ 5.5%

Absorption by Co-operatives @ 1% (Apex Bank, DCC Banks, PACSs, PCARDBs)

DCC Banks shall provide loans @ 4% to the PACS and PACS (including those ceded to Commercial Banks) shall provide loans @ 6% to farmers. The PACSs and PCARDBs providing crop loans out of their own funds shall also charge 6% and claim the differential cost of 5.5% from the concerned DCCB / KSCARD Bank.

The Apex Bank shall workout an arrangement for absorbing 1% among the different tiers i.e., PACSs, DCCBs and Apex Bank. In respect of S.11 banks where Apex bank provides loans to DCCBs out of its own funds, the Apex Bank shall ensure that adequate margin is available to the DCCBs.

**(2) Long term loan Average lending rate 13.5%**

Govt. will provide @ 5.5%

Absorption by Co-operatives (KASCARDB/PCARDB) 2%

KSCARD Bank shall provide loans to PCARD Banks @ 3.5% and PCARD Banks shall advance LT Loans to farmers @ 6%. Even in respect of loans advanced directly by PCARD Banks out of their own funds, the rate of interest shall be 6% and the PCARDBs shall claim the differential cost of 5.5% from the KSCARD Bank.

The KSCARD Bank shall work out an arrangement for absorbing 2% among PCARDBs and KSCARD Bank.

Thus Co-operative Credit Institutions shall bear the burden of 1% in respect of ST/MT Loans and 2% in respect of LT Loans.

**VIII. Mode of release:-**

1. The Government will sanction the entire amount in 2 installments out of the amount of Rs.60.00 crores earmarked for the purpose in the budget for 2004-05 and deposit the amount with the Karnataka State Co-Operative Apex Bank in advance in the name of the Registrar of CS.
2. The Registrar shall release subsidy @ 5.5% to the DCCBs on the quantum of ST/MT Loans advanced to the farmers by PACSs and PCARDBs every quarter based on the claims submitted by DCCBs and certified by the Deputy Director of Cooperative Audit.
3. The Registrar shall release subsidy @ 5.5% to KSCARD Bank on the quantum of loans sanctioned to the farmers by PCARDBs every quarter based on the actual claims submitted by KSCARDB and duly Certified by Deputy Director of Cooperative Audit.
4. The claims shall be prepared quarterly by the DCCBs in respect of PACS including the advances made out of the own funds of PACS and KSCARD Bank in respect of PCARDBs including the advances made by PCARDBS out of their own funds. These claims shall be verified and certified by the respective Deputy Directors of Cooperative Audit and submitted to the Registrar within 15th of the month following the close of the quarter. The RCS shall, after due verification, release the subsidy to the DCCBs / KSCARDB by the 25th of the month by drawing on the amount with KSC Apex Bank.

**R.S.HUCHACHARY**

P.R. 1390 Officer on Special Duty, Co-operation Department

**FINANCE SECRETARIAT**

**Subject:** Continuance of waiver of CST levied on inter-state transfer of Jaggery-reg.

**Ref:** 1. G.O.No. FD 247 CSL 2002, dated: 07.12.2002.
2. G.O.No. FD 144 CSL 2003, dated: 13.06.2003.
3. G.O.No. FD 144 CSL 2003, dated: 14.07.2003.

**PREAMBLE:**

In the Government Order cited at (1) above, sanction was accorded to waive tax levied under the provisions of CST Act, 1956, on inter-state transfer of Jaggery during 11.05.2002 to 31.03.2003 by purchasing Commission Agents in the State subject to production of proof of such transfers before the assessing authorities. Further, sanction was accorded to extend this benefit for a further period from 01.04.2003 to 31.05.2003 & 01.06.2003 to 31.03.2004 in the Government Orders cited at (2) & (3) above.

Now, M/s. Mahalingpur Dalal Vartakar Sangh, Mahalingpur have requested the Government to continue the above benefit till the introduction of VAT in the State.

After examining the matter in detail, it has been decided to extend the above benefit till 31.03.2005. Hence, the following Order.

**GOVERNMENT ORDER No. FD 39 CSL 2004, Bangalore, Dated: 7th December 2004**

Sanction is hereby accorded to extend the benefit of waiver of tax levied under the provisions of the Central Sales Tax Act, 1956 on inter-state transfers of Jaggery from 1.4.2004 to 31.03.2005 subject to production of proof of such transfers before the assessing authorities.

By Order and in the Name of the Governor of Karnataka,

**S. DIVAKAR**

P.R. 1394 Under Secretary to Government, Finance Department (C.T.1).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಕೃತೋಇ 682 ಕೃಉಇ 2003, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2004**

ದಿನಾಂಕ: 1.12.2004 ರಂದು ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಕೃತೋಇ 682 ಕೃಉಇ 2003 ರಲ್ಲಿ ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರ ನಿರ್ದೇಶಕರ ಮಂಡಳಿಗೆ ಅಧಿಕಾರಿ ನಿರ್ದೇಶಕರ ನೇಮಕಾತಿ ಮಾಡಲಾಗಿದ್ದು, ಸದರಿ ಆದೇಶದ ಕ್ರಮ ಸಂಖ್ಯೆ 10 ರಲ್ಲಿ ಶ್ರೀ ಹೆಚ್. ಶಶಿಧರ್, ಭಾ.ಆ.ಸೇ., ಕೃಷಿ ಆಯುಕ್ತರು, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಧಿಕಾರಿ ನಿರ್ದೇಶಕರಾಗಿ ತೊಗರಿ ಅಭಿವೃದ್ಧಿ ಮಂಡಳಿಗೆ ನೇಮಕಾತಿ ಮಾಡಲಾಗಿದೆ. ಕ್ರಮ ಸಂಖ್ಯೆ: 10 ಮತ್ತು 11ಕ್ಕೆ ಬದಲಾಗಿ 11 ಮತ್ತು 12 ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಪಿ.ಆರ್. 1391 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಸಕಇ 320 ಬಿಇಟಿ 2002, ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2004**

ಸರ್ಕಾರಿ ಆದೇಶ ಸಂಖ್ಯೆ: ಸಕಇ 320 ಬಿಇಟಿ 2002, ದಿನಾಂಕ: 24.11.2004ರ ಆದೇಶದಲ್ಲಿ "ತೆರವುಗೊಳಿಸಿ" ಎಂದು ನಮೂದಿಸಲಾದ ಪದಗಳಿಗೆ ಬದಲಾಗಿ "ರದ್ದುಗೊಳಿಸಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್. 1392 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀ ರಾಜಶೇಖರ ಬಿ. ತುಪ್ಪದ, ಪದವೀಧರ ಇಂಜಿನಿಯರ್ (ಎಂ.ಆರ್‌ಇ) ಇವರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94.
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 357 ಪಿಡಬ್ಲ್ಯುಸಿ 90 ದಿನಾಂಕಃ 2.12.94
3. ಸರ್ಕಾರದ ಪತ್ರ ಸಂಖ್ಯೆ:ಪಿಡಬ್ಲ್ಯುಡಿ 201 ಪಿಡಬ್ಲ್ಯುಸಿ 95, ದಿನಾಂಕಃ 2.7.94, 1.9.95 ಮತ್ತು 13.9.95.
4. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲುಡಿ 32 ಪಿಡಬ್ಲುಸಿ 95(ಪಿ) ದಿನಾಂಕ: 20.8.96.
5. ಮುಖ್ಯ ಇಂಜಿನಿಯರ್, ಸಂಕ(ಉ)ಧಾರವಾಡ ಇವರ ಪತ್ರ ಸಂಖ್ಯೆ: ಸಿಬಿಎನ್:ಸಿ–10:ದಿನಗೂಲಿ:26:2004–05:5333: ದಿ: 28.9.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಛ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (5) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉ)ಧಾರವಾಡ ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 32 ಪಿಡಬ್ಲ್ಯುಸಿ 95(ಪಿ) ದಿನಾಂಕ 20.8.96ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಪದವೀಧರ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ ಸರ್ಕಾರಿ ಆದೇಶ ಸಂಖ್ಯೆ: ಲೋಇ 43 ಪಿಡಬ್ಲ್ಯುಸಿ 2004, ಬೆಂಗಳೂರು ದಿನಾಂಕ: 8ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 32 ಪಿಡಬ್ಲ್ಯುಸಿ 95(ಪಿ) ದಿನಾಂಕ 20.8.96ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರ. ಸಂ. | ಹೆಸರು | ಜನ್ಮ ದಿನಾಂಕ | ಕೋರ್ಸ್ ಕಂಪ್ಲೀಟೆಡ್ ಎಂದು ದಿನಗೂಲಿಗೆ ಸೇರಿದ ದಿನಾಂಕ : ಬಿ.ಇ. ಪಾಸಾದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧ ಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|---|
| 1. | ಶ್ರೀ ರಾಜಶೇಖರ ಬಿ. ತುಪ್ಪದ, ಪದವೀಧರ ಇಂಜಿನಿಯರ್ | 1.5.1965 | 1.8.91<br>ಜುಲೈ 94 | ಜುಲೈ 2004 | 1.8.2004 | ಲೋಇ ಉಪ ವಿಭಾಗ, ಯಾದಗಿರಿ |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉ) ಧಾರವಾಡ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತುಕಟ್ಟಡಗಳು(ಉ)ಧಾರವಾಡ ಇವರಲ್ಲಿ ಕಾರ್ಯವರದಿ ಮಾಡುವುದು. ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಚಂದ್ರಶೇಖರಪ್ಪ**

ಪಿ.ಆರ್. 1395 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು–ಸಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಯದರ್ಶಿ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 324 ಎಸ್‌ಎಎಸ್ 2004, ದಿನಾಂಕ: 3.8.2002.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ದಿನಾಂಕ: 5.8.2002 ಹಾಗೂ 7.2.2003 (ಭಾಗ-2).
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 95, ದಿನಾಂಕ: 1.1.1996.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 8 ಸಸಿವಿ 2003, ದಿನಾಂಕ: 6.3.2003 ಹಾಗೂ ತಿದ್ದೋಲೆ ದಿ: 21.8.2003.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸಸಿವಿ 2002, ದಿನಾಂಕ: 11.3.2002.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 88 ಸಸಿವಿ 2003, ದಿನಾಂಕ: 1.1.2004.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 1995 ದಿನಾಂಕ: 22.7.1995.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 97, ದಿನಾಂಕ: 5.2.1998.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 3.8.2002ರ ಸರ್ಕಾರದ ಆದೇಶದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಕಾರ್ಯದರ್ಶಿ ಹುದ್ದೆಗೆ ನಿಮ್ನೀಕರಿಸಿ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ದಿನಾಂಕ: 5.8.2002ರ ಆದೇಶದಲ್ಲಿ ಡಿ.ಡಿ.ಪಿ.ಇ.ಆರ್. ಇಲಾಖೆಯನ್ನು ಸೃಜಿಸಲಾಗಿದೆ. ಹಾಗೂ ದಿನಾಂಕ: 7.2.2003ರ ಆದೇಶದಲ್ಲಿ ದಿನಾಂಕ: 30.12.2002 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ನಿರ್ದೇಶಕರು (ಬಂ.ಹಿ.) ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸಲಾಗಿದೆ.

ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ದಿನಾಂಕ: 1.1.1996ರ ಆದೇಶದಲ್ಲಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯನ್ನು ಕಾನೂನು ಇಲಾಖೆಯಿಂದ ಪ್ರತ್ಯೇಕಿಸಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಎಂಬ ಹೊಸ ಇಲಾಖೆಯನ್ನು ಕಾರ್ಯದರ್ಶಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸಲಾಗಿದೆ.

ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆಡಳಿತ ಸುಧಾರಣೆ ವಿಭಾಗದಲ್ಲಿ ಸರ್ಕಾರದ ಕಾರ್ಯದರ್ಶಿ (ಇ-ಆಡಳಿತ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸಲಾಗಿದೆ.

ಕ್ರಮ ಸಂಖ್ಯೆ (5) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಇಲಾಖೆಗೆ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸಲಾಗಿದೆ ಹಾಗೂ ಮೇಲೆ ಕ್ರಮ ಸಂಖ್ಯೆ (6) ರಲ್ಲಿನ ದಿನಾಂಕ: 1.1.2004ರ ಆದೇಶದಲ್ಲಿ ದಿನಾಂಕ: 20.10.2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರು ಪದನಾಮೀಕರಿಸಲಾಗಿದೆ.

ಕ್ರಮ ಸಂಖ್ಯೆ (7) ರಲ್ಲಿ ಓದಲಾಗಿರುವ ದಿನಾಂಕ: 22.7.1995ರ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಪ್ರಾಜೆಕ್ಟ್ ಫೈನಾನ್ಸ್) ಎಂಬ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸಿದೆ. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 2002, ದಿನಾಂಕ: 4.6.2002ರ ಆದೇಶದಲ್ಲಿ ಕಾರ್ಯದರ್ಶಿ (ಸಂಪನ್ಮೂಲ) ಹುದ್ದೆಯನ್ನು ದಿನಾಂಕ: 1.12.2001 ರಿಂದ ಜಾರಿಗೆ ಬರುವಂತೆ ಕಾರ್ಯದರ್ಶಿ (ಆಯವ್ಯಯ) ಎಂದು ಮರು ಪದನಾಮೀಕರಿಸಲಾಗಿದೆ.

ಕ್ರಮ ಸಂಖ್ಯೆ: (8) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ಸಾರಿಗೆ ವಿಷಯಗಳನ್ನು ನಿರ್ವಹಿಸಲು ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸಿದೆ. ನಂತರ ಈ ಹುದ್ದೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 1 ಸಸಿವಿ 2003 (1) ದಿನಾಂಕ: 21.2.2003 ರಲ್ಲಿ ಪ್ರಧಾನ ಕಾರ್ಯದರ್ಶಿ (ಸಾರಿಗೆ) ಎಂದು ಉನ್ನತೀಕರಿಸಿ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ಇರುವ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸಲಾಗಿದೆ.

ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗುತ್ತಿದ್ದು, ಸದರಿ ಹುದ್ದೆಗಳನ್ನು ಖಾಯಂಗೊಳಿಸುವುದು ಸೂಕ್ತವೆಂದು ನಿರ್ಧರಿಸಿ ಈ ಕೆಳ ಕಾಣಿಸಿದ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 27 ಸಸಿವಿ 2004, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಇಲಾಖೆಗಳಲ್ಲಿ ತಾತ್ಕಾಲಿಕವಾಗಿ ಸೃಜಿಸಲಾದ ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ ಹುದ್ದೆಗಳನ್ನು ಅವುಗಳ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಖಾಯಂಗೊಳಿಸಲಾಗಿದೆ.

1. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ (ಪಂಚಾಯತ್ ರಾಜ್)
2. ಬಂಡವಾಳ ಹಿಂತೆಗೆಯುವಿಕೆ ಮತ್ತು ರಾಜ್ಯ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ (ಬಂಡವಾಳ ಹಿಂತೆಗೆಯುವಿಕೆ).
3. ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.
4. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ).
5. ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ).
6. ಆರ್ಥಿಕ ಇಲಾಖೆ (ಸಂಪನ್ಮೂಲಗಳು).
7. ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸಾರಿಗೆ).

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1653 ವೆಚ್ಚ-5/2004. ದಿನಾಂಕ: 16.10.2004 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1396 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## FOREST, ECOLOGY AND ENVIRONMENT SECRETARIAT

**Subject:** Diversion of 9.15 ha. of forest land for setting up of Wind Farm in Joggimatti R.F. Sy.No.26 of Chitradurga Village in favour of M/s ARC Power Generation Private Ltd.

**Read:**
1. Letter No. A5(5)GFL. WIND.ARC.CR/2000-01, Dated: 28.2.01 of Principal Chief Conservator of Forests, Bangalore.
2. State Government letter No. FEE 112 FGL 2000, dated: 17.7.2001.
3. Letter No. F©A/11.2/222/KAR/MISC/1948 dated: 31.12.2003 of Government of India, Ministry of Environment and Forests, Bangalore.
4. State Government letter No. FEE 112 FGL 2000, dated: 26.10.2004.
5. Letter No. F©A/11.2/222/KAR/MISC, dated: 03.11.2004 of Government of India, Ministry of Environment and Forests, South Zone, Bangalore.

**PREAMBLE:**

The Principal Chief Conservator of Forests, Bangalore vide his letter dated 28.02.2001 read at (1) above submitted the proposal to obtain the approval of Government of India under Section 2 of Forest (Conservation) Act,1980 for diversion of 4.02 ha. of forest land for setting up of Wind Farm in Sy.No. 26 Joggimatti R.F.,Chitradurga Village in favour of M/s ARC Power Generation Private Ltd. subject to certain conditions.

Accordingly the proposal was recommended to Government of India vide State Government letter dated 17.07.2001 read at (2) above.

The Government of India, Ministry of Environment and Forests, Bangalore vide letter dated 31.08.2001 made certain observation on the proposal and requested the State Government to recalculate and confirm the area requirement for the project. The Principal Chief Conservator of Forests, Bangalore vide his letter dated 23.05.2002 furnished the information that the actual requirement of forest land for the above project is 9.15 ha. as recalculated on the basis of the points raised by the Deputy Conservator of Forests(Central), Government of India, Regional Office, Bangalore and the same was sent to Government of India vide State Government letter dated: 17.7.2002.

The Government of India, Ministry of Environment and Forests, Bangalore vide their letter dated 31.12.2003 read at (3) above has given its approval in Principle (Stage-I) subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 21.10.2004 furnished the compliance report and the same has been sent to Government of India vide State Government letter dated: 26.10.2004 read at (4) above.

Finally, Government of India Ministry of Environment and Forests,Bangalore vide their letter dated 03.11.2004 read at(5) above has conveyed its approval (Stage-II) under Section 2 of Forest (Conservation) Act,1980 for diversion of 9.15 ha. of forest land for setting up of Wind Farm in Joggimatti R.F. Sy.No. 26 of Chitradurga Village in favour of M/s ARC Power Generation Private Ltd. subject to certain conditions.

The proposal has been examined in detail and hence the order.

**GOVERNMENT ORDER NO. FEE 112 FGL 2000, BANGALORE, DATED: 4th December 2004.**

In the Circumstances explained in the preamble above, Government are pleased to accord sanction under Section 2 of Forest (Conservation) Act, 1980 for diversion of 9.15 ha. of forest land for setting up of Wind Farm in Joggimatti R.F. Sy.No. 26 of Chitradurga Village in favour of M/s ARC Power Generation Private Ltd. Bangalore subject to the following conditions.

1. The legal Status of the forest land shall remain unchanged.
2. The compensatory afforestation shall be raised over 9.15 ha. of identified non-forest land at Survey No.21 of Yalakurnanahalli village, Hiriyur taluk, Chitradurga district at the cost of the user agency. The State Government shall obtain prior permission of Central Government for change of location and schedule of compensatory afforestation site, if any.

3. The non-forest land for compensatory afforestation shall be notified by the State Government as R.F/PF under Indian Forest Act, 1927 or the State Forest Act within a period of 6 months and Nodal officer(Forest Conservation) shall report the compliance within 6 months.
4. The total forest area utilized for the project shall not exceed 9.15 ha. In case the land is not used for the stipulated purpose, then the area will be resumed by the Forest Department.
5. The user agency shall deposit the Net Present Value(NPV) of the diverted forest area measuring 9.15 ha. with the State Forest Department as per the orders of the Hon`ble Supreme Court dated: 30.10.2002 and 1.8.2003 in I.A. No.566 in W.P.© No.202/95 and the guidelines issued by Ministry vide letter No.5-1/1998-FC(Pt.II) dated: 18.9.2003 and 22.9.2003 in this regard and the Government Notification No. FEE 247 FGL 2002, dated: 17.1.2004.
6. The State Government shall deposit all the above funds with Compensatory Afforestation Fund Management and Planning Authority(CAMPA) which has already been constituted and notified by the Central Government on 23.4.2004. Till such time the CAMPA intimates of the Head of Accounts for depositing funds, the funds will be maintained in the form of fixed deposits in the name of Nodal Officer or concerned Divisional Forest Officer of the State Government. The funds realised towards N.P.V. shall not be utilized by the State Government.
7. The lease period shall be for 30 years. In case the user agency proposes to sub-lease in favour of developers, it shall be done with a period of 4 years of from the date of issue of this approval. In case the developers fail to develop wind farm, the land shall be reverted back to Forest Department without any compensation.
8. The vane tips of the wind turbine shall be painted with orange colour to avoid bird hits. The location of the wind mill shall be such that it does not stand in the migratory path of the birds and is not near the breeding sites of the migratory birds.
9. A lease rent of Rs. 30,000.00 per MW for the period of lease in addition to cost of compensatory afforestation etc., shall be changed from the user agency. This amount shall be utilized in providing gas connection to the local villagers under the Joint Forest Management Programme and for other conservation measures. This amount shall be deposited with CAMPA by the State Government as soon as CAMPA intimates head of account.
10. About 65–70% of leased out area in the wind farm shall be utilized for developing medicinal plant gardens, if possible, by the State Forest Department at the project cost. The State Government may take the help of National Medicinal Plant gardens. The intervening areas between two wind mills` footprints should also be planted up by dwarf species of trees at the project cost.
11. Soil and moisture conservation measures like contour trenching shall be taken up on the hillock supporting the wind mill at the cost of the user agency.
12. Adequate fire protection measures, including employment of fire watchers and maintenance of the fire line etc., shall be undertaken by the user agency in the project area at its own cost.
13. Within the perimeter of wind farm, smaller turbines may be allowed for optimization of wind energy.
14. The wind turbine/wind mills to be used on forest lands and applicability of such technology in the country, should have general recognition of Ministry of Non-Conventional Energy Sources, Government of India.
15. The forest land shall not be used for any purpose other than that specified in the proposal.
16. It shall be ensured that the project area does not form part of any National Park/Sanctuary.
17. The lessee shall pay the lease rent as fixed by the Government from time to time.
18. The leased out area should be used for the purpose for which it is granted. In case the land is not used for the stipulated purpose with in one year or when it no longer needed for the stipulated purpose the area should automatically revert back to the Forest Department. The Deputy Conservator of Forests, Chitradurga will take necessary action in this regard.
19. The user agency shall deposit funds for raising compensatory plantation at the rate prevailing at the time of sanction.
20. Demarcation of the area will be done on ground at project cost using 4 feet high RCC Pillars. The pillars shall indicate serial numbers, forward and back bearings and distance between adjacent pillars.
21. Trees shall be felled only when it becomes necessary and under strict supervision of State Forest Department.

22. The user agency shall ensure that there shall be no damage to the available wildlife.
23. Within the perimeter of wind farm, smaller turbines may be allowed for optimization of wind energy.
24. The Karnataka Forest Act and Rules will be applicable for any violation.
25. The user agency should properly maintain the roads. All measures should be taken to avoid soil erosion.
26. The user agency shall abide by all the conditions imposed upon by Government of India, Government of Karnataka and principal Chief Conservator of Forests.
27. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By Order and in the Name of the Governor of Karnataka,

**S.R. VATSALA**

P.R. 1397 Under Secretary to Government, Forest, Ecology and Environment Department.

**Subject:** Gifting of female Elephant Veda to President of Armenia from Bannerghatta Biological Park.

**Read:** 1) G.O.No. FEE 141 FWL 2004, Dated: 04-10-2004.
2) Letter No.CI/CWL/CR-15/2004-05, Dated 23-11-2004 from the Principal Chief Conservator of Forest (Wildlife), Bangalore.
3) F.No.22-8/2001-CZA (M), Dated 18-11-2004 from the Member Secretary, Central Zoo Authority, Bikaner House, Shahjahan Road, New Delhi.

**Preamble:**

In G.O.No. FEE 141 FWL 2004, Dated: 04-10-2004, sanction of Government was accorded to gift the Elephant Komala from Mysore Zoo to his Excellency President of Armenia as a gift on behalf of Government of India. The Elephant died an un natural death while arrangements were being made to shift the animal to Armenia. Again it was decided to spare another female Elephant to President of Armenia in place of Komala. The Officers of the Armenian Ebassy and Officers of the Central Zoo Authority visited Bannerghatta Biological Park, Bangalore and have selected a female Elephant of 5 years 10 months named "**VEDA**" and it has been decided to gift the above Elephant to his Excellency President of Armenia.

It has also been requested to depute the following four Officers of Bannerghatta Biological Park to Armenia for period of two weeks along with the Elephant.

1) Sri M.S.Ravikumar, RFO, Bannerghatta Biological Park.
2) Dr: G. Shrinivasamurthy, Assistant Director of Veterinary Sciences, Bannerghatta Biological Park.
3) Mota, Kavadi, Bannerghatta Biological Park.
4) J.K.Bhaskar, Animal Attender, Bannerghatta Biological Park.

The proposal has been examined in detail and the following orders are issued.

**GOVERNMENT ORDER NO. FEE 141 FWL 2004 (Part-2) BANGALORE, DATED: 9th December 2004**

Sanction of Government is hereby accorded to spare the female Elephant by name "**VEDA**" from Bannerghatta Biological Park, Bangalore to Armenia as a gift on behalf of Government of India.

Sanction is also accorded for the deputation of the following four Officers to accompany the Elephant and to be with the Elephant for a period of two weeks in Armenia.

1) Sri M.S.Ravikumar, RFO, Bannerghatta Biological Park.
2) Dr: G. Shrinivasmurthy, Assistant Director of Veterinary Sciences, Bannerghatta Biological Park.
3) Mota, Kavadi, Bannerghatta Biological Park.
4) J.K.Bhaskar, Animal Attender, Bannerghatta Biological Park.

The Principal Secretary, Forest, Ecology and Environment Department will lead the team to Armenia to represent the Government of India.

The expenditure in this regard will be met by the Armenian Government.

By Order and in the Name of the Governor of Karnataka,

**K.N.Gayathri**

P.R. 1398 Under Secretary to Government, Forest, Ecology and Environment Department.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪೆನಿಗೆ, 0.5 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್ ಕೊಲ್ಲೂರು, ಕಿರುಜಲ ವಿದ್ಯುತ್ ಯೋಜನೆಯ ಅನುಷ್ಟಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಡಿಇ 53 ಎನ್‌ಸಿಇ 2001, ದಿನಾಂಕ: 8.10.2001.-

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ರಾಜನ್ ಕೊಲ್ಲೂರು/2004/2096, ದಿನಾಂಕ: 16.11.2004.

**ಪ್ರಸ್ತಾವನೆ:**

ಮೆಸರ್ಸ್ ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪೆನಿಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ರಾಜನ್ ಕೊಲ್ಲೂರು ಎಂಬಲ್ಲಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 31.12.2007 ರವರೆಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 394 ಎನ್‌ಸಿಇ 2004, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ರಾಜನ್ ಕೊಲ್ಲೂರು ಎಂಬಲ್ಲಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 31.12.2007 ರವರೆಗೆ ವಿಸ್ತರಿಸಲಾಗಿದೆ.

4. ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 1399     ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಶಿವಲಿಂಗಯ್ಯ ಪಿಸಿ 6787, ಕೆ.ಪಿ. ಅಗ್ರಹಾರ ಪೊಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಉಪ ಪೊಲೀಸ್ ಕಮೀಷನರ್, ಪಶ್ಚಿಮ ವಿಭಾಗ, ಬೆಂಗಳೂರು ರವರ ಅ.ಸಂ.15:ಡಿಇ:ಆರ್.7:ಡಿಸಿಪಿ(ಪ) 2002, ದಿನಾಂಕ: 2.1.2003.

2. ಅಡಿಷನಲ್ ಪೊಲೀಸ್ ಕಮೀಷನರ್ ಆ ಮತ್ತು ಸಿಎಆರ್, ಬೆಂಗಳೂರು ನಗರ ರವರ ಅ.ಸಂ. ಅಪೀಲು:12:2003 ಓಬಿ ಸಂ: 750:03, ದಿನಾಂಕ: 17.6.2003.

3. ಅರ್ಜಿದಾರರ ಮನವಿ ದಿನಾಂಕ: 6.10.2003.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ: ಅಪೀಲು:2:81:2003-04, ದಿ: 11.6.2004.

**ಪ್ರಸ್ತಾವನೆ:**

ಶ್ರೀ ಶಿವಲಿಂಗಯ್ಯ, ಪಿ.ಸಿ. 6787, ಕೆ.ಪಿ. ಅಗ್ರಹಾರ ಬೆಂಗಳೂರು ನಗರ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪ:**

"ಪಿಸಿ 6768 ಶಿವಲಿಂಗಯ್ಯ, ಕಲಾಸಿಪಾಳ್ಯ ಪೊಲೀಸ್ ಠಾಣೆ ಆದ ನೀವು ದಿನಾಂಕ: 8.8.2002 ರಂದು ಠಾಣಾ ಕರ್ತವ್ಯ ನಿರ್ವಹಿಸುತ್ತಿದ್ದು ಸುಮಾರು 8.30 ಗಂಟೆ ಸಮಯದಲ್ಲಿ ಶ್ರೀ ತಬರಾಜ್ ಅಲಂಖಾನ್ ಅಮಾನುಲ್ಲಾಖಾನ್ ಎಂಬುವರನ್ನು ಠಾಣೆಯಿಂದ ಮೂತ್ರ ವಿಸರ್ಜನೆಗೆ ಕರೆದುಕೊಂಡು ಹೋಗಿ ಅವನ ಮೇಲೆ ಕೈಯಿಂದ ಹಲ್ಲೆ ಮಾಡಿ, ಲಾಠಿಯಿಂದ ಹೊಡೆದು ಬೂಟ್ ಕಾಲಿನಿಂದ ಆತನ ಕಾಲುಗಳಿಗೆ ಒದ್ದು, ಎರಡೂ ಕಾಲುಗಳ ಬೆರಳುಗಳಿಗೆ ಗಾಯ ಮಾಡಿದ್ದಲ್ಲದೆ ಆತನಲ್ಲಿದ್ದ 120-00 ರೂ.ಗಳನ್ನು ಬಲವಂತವಾಗಿ ಕಸಿದುಕೊಂಡು ನಂತರ ಈ ವಿಚಾರವನ್ನು ಯಾರಿಗೂ ಹೇಳಬಾರದೆಂದು ಬೆದರಿಕೆ ಹಾಕಿ ಅಧಿಕಾರ ದುರುಪಯೋಗ ಹಾಗೂ ದುರ್ನಡತೆ ಪ್ರದರ್ಶಿಸಿರುವುದಲ್ಲದೆ, ಅಶಿಸ್ತಿನಿಂದ ವರ್ತಿಸಿ ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುತ್ತದೆ".

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ಮುಂದೂಡಿದ್ದು ಇದರ ಮೇಲ್ಮನವಿಯನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ತಾನು ಆ ದಿನ ಕರ್ತವ್ಯದ ಮೇಲಿರಲಿಲ್ಲ. ಸದರಿ ವ್ಯಕ್ತಿಯನ್ನು ಠಾಣೆಗೆ ಕರೆತಂದ ಬಗ್ಗೆ ದಾಖಲೆ ಇಲ್ಲ. ಸದರಿ ವ್ಯಕ್ತಿ ಕಳವು ಪ್ರಕರಣದಲ್ಲಿ ಬೇಕಾಗಿದ್ದು, ಮುಸ್ಲಿಂ ಜನಾಂಗದ ಕೆಲವರು ಠಾಣೆಯ ಮುಂದೆ ಘೋಷಣೆ ಕೂಗಿದ್ದರಿಂದ ತಮ್ಮ ಮೇಲೆ ಗೂಬೆ ಕೂರಿಸಲು ಈ ರೀತಿ ಆರೋಪ ಮಾಡಿದ್ದಾರೆಂದು ವಾದಿಸಿರುತ್ತಾರೆ. ಆದರೆ ಅದಕ್ಕೆ ಪೂರಕವಾದ ಯಾವುದೇ ಆಧಾರಗಳನ್ನು ಮಂಡಿಸಿರುವುದಿಲ್ಲ. ಅರ್ಜಿದಾರರ ವಿರುದ್ಧ ಸದರಿ ವ್ಯಕ್ತಿ ಫಿರ್ಯಾದು ನೀಡಿದ್ದರಿಂದ ಶಿಸ್ತು ಕ್ರಮ ಕೈಗೊಂಡಿರುವುದು ದಾಖಲೆಗಳಿಂದ ಸ್ಪಷ್ಟವಾಗುತ್ತದೆ.

ಅರ್ಜಿದಾರರ ಮನವಿಯಲ್ಲಿ ಪರಿಗಣಿಸಬಹುದಾದ ಅಂಶಗಳು ಇಲ್ಲದೇ ಇರುವುದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 216 ಪೊಸಿಅ 2004, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಾಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಲಿಂಗಯ್ಯ ಪಿಸಿ 6787, ಕೆ.ಪಿ. ಅಗ್ರಹಾರ ಪೊಲೀಸ್ ಠಾಣೆ ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1402 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಕೆ.ಎನ್. ಶಿವಮೂರ್ತಿ ಮಾಜಿ ಪಿಸಿ 540 ಶಿವಮೊಗ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಎಸ್.ಪಿ. ಶಿವಮೊಗ್ಗ ಜಿಲ್ಲೆರವರ ಅ.ಸಂ: ಡಿಇ:9:98 ಓಬಿ ಸಂ: 587:98-99, ದಿನಾಂಕ: 25.3.98.
2. ಐ.ಜಿ.ಪಿ. ಪೂರ್ವ ವಲಯ ದಾವಣಗೆರೆ ರವರ ಅ.ಸಂ: ಸಿಬ್ಬಂದಿ:(2) 21:2003-04, ದಿನಾಂಕ: 28.6.2003.
3. ಅರ್ಜಿದಾರರ ಮನವಿ ದಿನಾಂಕ: 17.3.2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ:ಅಪೀಲು:(2)18:2003-04, ದಿ: 5.7.2004.

**ಪ್ರಸ್ತಾವನೆ:**

ಶ್ರೀ ಕೆ.ಎನ್. ಶಿವಮೂರ್ತಿ, ಮಾಜಿ ಪಿಸಿ 540, ಶಿವಮೊಗ್ಗ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ರವರ ವಿರುದ್ಧ ಈ ಕೆಳಕಂಡ ದೋಷಾರೋಪಕ್ಕೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ದಿನಾಂಕ: 18.3.98 ರಂದು ರಾತ್ರಿ ಪಿಸಿ 540 ಶಿವಮೂರ್ತಿಯವರಿಗೆ 3ನೇ ರಾತ್ರಿ ಗಸ್ತು ಮತ್ತು 4ನೇ ರಾತ್ರಿ ಗಸ್ತು ನೇಮಕವಾಗಿದ್ದು ಪಿಸಿ 353 ದೊಂದಿಗೆ ಕರ್ತವ್ಯ ನಿರ್ವಹಿಸಲು ನೇಮಕ ಮಾಡಿದ್ದರ ಮೇರೆಗೆ 3.05ರ ಸಮಯದಲ್ಲಿ ಜೊತೆಯಲ್ಲಿದ್ದ ಪಿಸಿ 353 ರವರನ್ನು ತೊರೆದು ಮಧ್ಯಪಾನ ಮಾಡಿ ರಾತ್ರಿ ಗಸ್ತನ್ನು ಸಮರ್ಪಕವಾಗಿ ನಿರ್ವಹಿಸದೇ 3.05 ಗಂಟೆಯಲ್ಲಿ ಕೆಎಸ್ಆರ್‌ಟಿಸಿ ಬಸ್ಸು ಸ್ಟ್ಯಾಂಡಿನಲ್ಲಿ ಬಸ್ಸಿಗೆ ಕಾಯುತ್ತಿದ್ದು ನಾರಾಯಣಪುರ ಗ್ರಾಮದ ವಾಸಿ ರಾಮಚಂದ್ರನಾಯ್ಕು, ದೇವ್ಲಾನಾಯ್ಕು, ರೂಪ್ಲಾನಾಯ್ಕು, ಕ್ಲೀನರ್, ಹನೀಫ್ ಮಲ್ಲಾಪುರ ಗ್ರಾಮದ ವಾಸಿಗಳನ್ನು ಅವಾಚ್ಯ ಶಬ್ದಗಳಿಂದ ಬೈದು ಲಾಠಿಯಿಂದ ಹೊಡೆದು ಸೌಹಾರ್ದತೆಯಿಂದ ನಡೆದುಕೊಳ್ಳಬೇಕಿದ್ದ ನೀವು ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನದಿಂದ ವರ್ತಿಸಿರುತ್ತೀರಿ.

2) ಪಿಸಿ 540 ಶಿವಮೂರ್ತಿಯವರು ಸಮವಸ್ತ್ರದಲ್ಲಿ ಕರ್ತವ್ಯದ ಮೇಲಿರುವಾಗ ಮದ್ಯಪಾನ ಮಾಡಿ ನಿರ್ವಹಿಸಬೇಕಾದ ಕರ್ತವ್ಯವನ್ನು ತೊರೆದು ಸಾರ್ವಜನಿಕರೊಂದಿಗೆ ಅವಿಧೇಯರಾಗಿ ವರ್ತಿಸಿ, ಕರ್ತವ್ಯ ಲೋಪವೆಸಗಿರುತ್ತೀರಿ".

ಮೇಲ್ಕಂಡ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾದ್ದರಿಂದ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಯವರು ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯನಿವೃತ್ತಿಗೊಳಿಸಿರುತ್ತಾರೆ.

ಈ ಆದೇಶ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

1) ಸಾಕ್ಷಿದಾರರ ದೂರುಗಳಿಲ್ಲದೇ ಅವರನ್ನು ಶಿಕ್ಷೆಗೆ ತೆಗೆದುಕೊಂಡಿರುವುದು.
2) ಪೊಲೀಸ್ ಅಧಿಕಾರಿ ಪತ್ನಿಯಿಂದ ವೈದ್ಯಕೀಯ ಪರೀಕ್ಷೆ ನಡೆಸಿರುವುದು.
3) ಮದ್ಯಪಾನದ ಬಗ್ಗೆ ಕೆಮಿಕಲ್ ವರದಿ ಪಡೆದಿರುವುದಿಲ್ಲ.

ಸಾಕ್ಷಿದಾರರು ಯಾವುದೇ ದೂರನ್ನು ನೀಡಿಲ್ಲ. ಹಾಗೂ ಲಾಠಿಯಿಂದ ಹೊಡೆದಿದ್ದುಕ್ಕೆ ವೈದ್ಯಕೀಯ ಪ್ರಮಾಣ ಪತ್ರ ಇಲ್ಲ ದೊಡ್ಡಪೇಟೆ, ಪಿ.ಎಸ್.ಐ. ರವರು ತಮ್ಮ ವಿರುದ್ಧ ದುರುದ್ದೇಶದಿಂದ ಇಲಾಖಾ ವಿಚಾರಣೆ ನಡೆಯಲು ಕಾರಣರಾಗಿರುತ್ತಾರೆ ಎಂದು ವಾದಿಸಿರುತ್ತಾರೆ. ಅರ್ಜಿದಾರರು ಮಂಡಿಸಿರುವ ವಾದಾಂಶಗಳಲ್ಲಿ ಅವರ ಮೇಲಿನ ಆರೋಪವನ್ನು ಅಲ್ಲಗೆಳೆಯುವಂತಹ ಯಾವುದೇ ಅಂಶಗಳನ್ನು ಮಂಡಿಸಿರುವುದಿಲ್ಲ. ಸಾರ್ವಜನಿಕರೊಂದಿಗೆ ಅನುಚಿತವಾಗಿ ವರ್ತಿಸುವ ಪೊಲೀಸ್ ಅಧಿಕಾರಿಯ ವರ್ತನೆಯನ್ನು ಸರ್ಕಾರವು ಸಹಿಸಲು ಸಾಧ್ಯವಿಲ್ಲ ಅರ್ಜಿದಾರರು ದುರ್ನಡತೆ ಎಸಗಿದ್ದು ಇದಕ್ಕೆ ಶಿಸ್ತು ಪ್ರಾಧಿಕಾರಿ ತಕ್ಕ ಶಿಕ್ಷೆ ವಿಧಿಸಿರುತ್ತಾರೆ ಮತ್ತು ಸಾರ್ವಜನಿಕ ಹಿತಾಸಕ್ತಿಯನ್ನು ಕಾಪಾಡಿರುತ್ತಾರೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 194 ಪೊಸಿಅ 2004, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಾಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎನ್. ಶಿವಮೂರ್ತಿ, ಮಾಜಿ ಪಿ.ಸಿ. 540, ಶಿವಮೊಗ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1403 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಪಿ.ಟಿ. ಸುಬ್ರಮಣ್ಯ, ಪಿಎಸ್ಐ, ಸಂಚಾರ ಠಾಣೆ, ರಾಮನಗರ, ಬೆಂಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಐಜಿಪಿ ಕೇಂದ್ರವಲಯ, ಬೆಂಗಳೂರು ರವರ ಅ.ಸಂ: ಡಿಇ:13:02-03 ಓಬಿ:179:02-03, ದಿ: 26.2.2003.
2. ಮನಿ ಮತ್ತು ಅಮನಿರವರ ಅ.ಸಂ: ಅಪೀಲು(6) 01:2003-04, ದಿನಾಂಕ: 28.6.2003.
3. ಅರ್ಜಿದಾರರ ಮನವಿ ದಿನಾಂಕ: 12.11.2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ:ಅಪೀಲು:(2)95:2003-04, ದಿ: 9.6.2004.

**ಪ್ರಸ್ತಾವನೆ:**

ಶ್ರೀ ಪಿ.ಟಿ. ಸುಬ್ರಮಣ್ಯ, ಪಿಎಸ್‌ಐ, ಬೆಂಗಳೂರು ಗ್ರಾಮಾಂತರ ಜಿಲ್ಲೆರವರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಶ್ರೀ ಪಿ.ಟಿ. ಸುಬ್ರಮಣ್ಯ, ಆದ ನೀವು ನಂದಗುಡಿ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಮತ್ತಂದ್ರ ಗ್ರಾಮದ ಶ್ರೀಮತಿ ಲಕ್ಷ್ಮಮ್ಮ ಕೋಂ ನಾರಾಯಣಪ್ಪ ರವರ 17 ವರ್ಷದ ಮಗ ಅಂಜನಪ್ಪರವರನ್ನು ಅನಗತ್ಯವಾಗಿ ಹೊಡೆದು ಚಿತ್ರ ಹಿಂಸೆ ನೀಡಿ, ಹಲ್ಲೆ ನಡೆಸಿ ದರ್ಪ ತೋರಿಸಿದ್ದು, ಸಾರ್ವಜನಿಕರೊಡನೆ ಉತ್ತಮ ಬಾಂಧವ್ಯವನ್ನು ಹೊಂದುವುದನ್ನು ಬಿಟ್ಟು ಕರ್ತವ್ಯದಲ್ಲಿ ದರ್ಪ ದೌರ್ಜನ್ಯ ದುರ್ನಡತೆ ತೋರಿದ ಬಗ್ಗೆ".

ಮೇಲ್ಕಂಡ ಆರೋಪವು ಇಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾಗಿದ್ದು ಅರ್ಜಿದಾರರು ಸಮಜಾಯಿಷಿಯಿಂದ ತೃಪ್ತರಾಗದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮರಹಿತವಾಗಿ 2 ವರ್ಷ ಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಆದೇಶ ವಿರುದ್ಧವೂ ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

(1) ಶಿಸ್ತು ಮತ್ತು ಅಪೀಲು ಪ್ರಾಧಿಕಾರಿಗಳು ನ್ಯಾಯ ಸಮ್ಮತವಾಗಿ ನಡೆದುಕೊಂಡಿಲ್ಲ ದೋಷಾರೋಪ ನಿರ್ದಿಷ್ಟವಾಗಿಲ್ಲ.

(2) ಇಲಾಖಾ ವಿಚಾರಣಾ ಅಧಿಕಾರಿ ಪೂರ್ವಗ್ರಹಪೀಡಿತರಾಗಿ ತಮ್ಮ ವಿರುದ್ಧ ವರದಿ ಸಲ್ಲಿಸಿರುತ್ತಾರೆ.

(3) ಈ ಆಪಾದನೆ ಫಿರ್ಯಾದುದಾರ ಮತ್ತು ಆತನ ತಂದೆ ಸೃಷ್ಟಿಸಿದ ಕಥೆಯಾಗಿದೆ ಫೋಟೋಗಳ ಒರಿಜಿನಲ್ ಪ್ರತಿ ಇಲ್ಲ ಫಿರ್ಯಾದುದಾರನ ಸಂಬಂಧಿಕರ ಹೇಳಿಕೆಯ ಮೇಲೆ ತನಗೆ ವಿನಾಕಾರಣ ಶಿಕ್ಷೆ ವಿಧಿಸಲಾಗಿದೆ.

(4) ಫಿರ್ಯಾದುದಾರ ನ್ಯಾಯಾಲಯ ವಿಚಾರಣೆಯಲ್ಲಿ ತನ್ನನ್ನು ಯಾರೂ ಹೊಡೆದಿಲ್ಲ ಎಂದು ನುಡಿದಿದ್ದರೆ ಆದರೆ ಇಲಾಖಾ ವಿಚಾರಣೆಯಲ್ಲಿ ತಾವು ಹೊಡೆದಿದ್ದರಿಂದ ಗಾಯವಾಗಿದೆ ಎಂದು ನುಡಿದಿರುತ್ತಾರೆ ಇದು ನಂಬಲು ಸಾಧ್ಯವಿಲ್ಲ.

(5) ಪೂರ್ವಭಾವಿ ಇಲಾಖಾ ವಿಚಾರಣೆಯ ಆಧಾರದ ಮೇಲೆ ತನಗೆ ಶಿಕ್ಷೆ ವಿಧಿಸಲಾಗಿದೆ.

ಉಳಿದಂತೆ ವಾದಾಂಶಗಳು ಪುನರಾವರ್ತವಾಗಿದೆ. ಅರ್ಜಿದಾರರು ಮಂಡಿಸಿರುವ ವಾದಾಂಶಗಳ ಬಗ್ಗೆ ಶಿಸ್ತು ಪ್ರಾಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳು ತಮ್ಮ ಆದೇಶಗಳಲ್ಲಿ ಚರ್ಚಿಸಿರುತ್ತಾರೆ. ಹೊಸ ಅಂಶಗಳನ್ನೇನೂ ಮಂಡಿಸಿರುವುದಿಲ್ಲ. ಕಾನೂನು ಪಾಲನೆ ಮಾಡಬೇಕಾದ ಅಧಿಕಾರಿ ಹಲ್ಲೆ ನಡೆಸಿ ಫಿರ್ಯಾದುದಾರರಿಗೆ ಗಾಯವುಂಟು ಮಾಡಿರುವುದು ನಿಸ್ಸಂದೇಹವಾಗಿ ಸಾಬೀತಾಗಿದೆ. ಇಲಾಖಾ ವಿಚಾರಣಾ ಅಧಿಕಾರಿಗಳು ಪೂರ್ವಾಗ್ರಹಪೀಡಿತರಾಗಿರುವ ಬಗ್ಗೆ ಆಧಾರಗಳಿಲ್ಲ ಅಭಿಯೋಗ ಸಾಕ್ಷ್ಯ 1 ಮತ್ತು 2ರ ಸಾಕ್ಷ್ಯಗಳಲ್ಲಿ ಫಿರ್ಯಾದುದಾರನ ಕಾಲಿನಲ್ಲಿ ಎರಡನೇ ಮೂಳೆ ಮುರಿದಿರುವುದು ಎಕ್ಸರೇಯಲ್ಲಿ ತಿಳಿದು ಬರುತ್ತದೆ. ಎಂದು ನುಡಿದಿರುವುದು ಅರ್ಜಿದಾರರ ಮೇಲಿನ ಆಪಾದನೆ ನಿಸ್ಸಂದೇಹವಾಗಿ ಸಾಬೀತಾಗಿದೆ. ಅವರ ವಾದಾಂಶಗಳಲ್ಲಿ ಪರಿಗಣಿಸಬಹುದಾದ ಅಂಶಗಳು ಕಂಡು ಬರದೇ ಇರುವುದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 236 ಪೊಸಿಅ 2003, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಾಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಟಿ. ಸುಬ್ರಮಣ್ಯ, ಪಿ.ಎಸ್.ಐ. ಸಂಚಾರ ಠಾಣೆ, ರಾಮನಗರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1404 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಎನ್.ಎಚ್. ಕಟಕದೊಂಡ, ರೀಡರ್, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ ಚಿತ್ರದುರ್ಗ ಇವರ ಮೇಲಿನ ಆರೋಪಗಳಿಗೆ ಶಿಸ್ತುಕ್ರಮ - ಅಂತಿಮ ಆದೇಶ.

**ಓದಲಾಗಿದೆ:**
1. ಸೂಚನಾ ಪತ್ರಸಂಖ್ಯೆ: ಇಡಿ 153 ಡಿಜಿಡಿ 2001, ದಿನಾಂಕ: 14.5.2003.
2. ಶ್ರೀ ಕಟಕದೊಂಡ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: - ಇಲ್ಲ -

**ಪ್ರಸ್ತಾವನೆ:**

ಶ್ರೀ ಎನ್.ಎಚ್. ಕಟಕದೊಂಡ, ರೀಡರ್, ಸಿ.ಟಿ.ಇ. ಚಿತ್ರದುರ್ಗ ಇವರು ಹಿಂದೆ ಧಾರವಾಡ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ್ದರೆನ್ನಲಾದ ಆರೋಪಗಳಿಗೆ ಸರ್ಕಾರವು ಶಿಸ್ತುಪ್ರಾಧಿಕಾರಿಯಾಗಿ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 12 (1) (ಎ) ಮೇರೆಗೆ ಸೂಚನಾ ಪತ್ರವನ್ನು ಆರೋಪಣ ಪಟ್ಟಿಯೊಂದಿಗೆ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು 15 ದಿವಸಗಳ ಕಾಲಾವಕಾಶ ಕಲ್ಪಿಸಲಾಗಿತ್ತು.

ಶ್ರೀ ಎನ್.ಎಚ್. ಕಟಕದೊಂಡ ಇವರು ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ಅವರ ಮೇಲಿನ ಆರೋಪಗಳನ್ನು ನಿರಾಕರಿಸಿರುವರು.

ಆಪಾದಿತರ ಮೇಲಿನ ಆರೋಪಕ್ಕೆ ಪೂರಕವಾದ ದಾಖಲೆಗಳನ್ನು ಹಾಗೂ ಪ್ರತಿರಕ್ಷಣಾ ಹೇಳಿಕೆಗಳಲ್ಲಿನ ಅಂಶಗಳನ್ನು ಪರಿಶೀಲಿಸಿದ ನಂತರ ಆರೋಪಗಳಲ್ಲಿ ಯಾವುದೇ ದುರ್ನಡತೆ ಸಾಬೀತಾಗುವುದಿಲ್ಲ ಎಂಬ ನಿರ್ಣಯಕ್ಕೆ ಬಂದು, ಸದರಿಯವರನ್ನು ದೋಷಮುಕ್ತರನ್ನಾಗಿಸುವುದು ಉಚಿತವೆಂದು ಸರ್ಕಾರವು ನಿರ್ಣಯ ಕೈಗೊಂಡಿದೆ, ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 153 ಡಿಜಿಡಿ 2001, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎನ್.ಎಚ್. ಕಟಕದೊಂಡ, ರೀಡರ್, ಸಿ.ಟಿ.ಇ. ಚಿತ್ರದುರ್ಗ ಇವರ ಮೇಲಿನ ದೋಷಾರೋಪಣೆಯಿಂದ ಮುಕ್ತರನ್ನಾಗಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 1405 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2).